# ಋತ, ಸತ್ಯ, ಧರ್ಮ

## ಇವುಗಳ ಅನ್ಯೋನ್ಯ ಸಂಬಂಧಗಳು

ಡಿ. ವಿ. ಜಿ.



ಮೈಸೂರು
ಕಾವ್ಯಾಲಯ : : ಪ್ರಕಾಶಕರು

ಬೆಲೆ : ರೂ. 3.

ಕನ್ನಡ ಕಾವ್ಯಮಾಲೆ

# ಮತ, ಸತ್ಯ, ಧರ್ಮ

ಶ್ರೀಮಾನ್ ಅಧ್ಯಾಪಕ ಕೃಷ್ಣಭಟ್ಟರಿಗೆ
ವಿಶ್ವಾಸದಿಂದ
26/2/80 ಡಿವಿಗುಂಡಪ್ಪ

ಡಿ. ವಿ. ಜಿ.





ಮೈಸೂರು
ಕಾವ್ಯಾಲಯ : : ಪ್ರಕಾಶಕರು

# ಅರಿಕೆ

ಋತ ಸತ್ಯ ಧರ್ಮ—ಇವುಗಳ ಸ್ವರೂಪವನ್ನೂ ಅನ್ಯೋನ್ಯ ಸಂಬಂಧವನ್ನೂ ವಿವರಿಸುವುದೇ ಈ ಪುಸ್ತಕದ ಉದ್ದೇಶ.

ದೇವರು ಎಂಬ ಮಹಾ ಚೈತನ್ಯದಲ್ಲಿರುವ ಮೂಲ ನಂಬಿಕೆಯೇ ಋತ. ಋತದಿಂದ ಸತ್ಯದ ವಿವೇಚನೆ. ಸತ್ಯಾನುಸರಣೆಯಿಂದ ಹೊರಡುವ ಕ್ರಿಯೆಯೇ ಧರ್ಮ: ಆತ್ಮೋದ್ಧಾರಕ್ಕೂ ಜಗತ್ತಿನ ಹಿತಸಾಧನೆಗೂ ಸಾಧಕವಾದ ವರ್ತನೆಯೇ ಧರ್ಮ.

ಈ ಲೇಖಕರ 'ದೇವರು' ಎಂಬ ಚಿಕ್ಕ ಪುಸ್ತಕವನ್ನು ಓದಿದವರು ಈ ಕೃತಿಯನ್ನೂ ಅಗತ್ಯವಾಗಿ ಓದಬೇಕಾದದ್ದು.

*    *    *    *    *

ಈ ಪುಸ್ತಕದ ಹಸ್ತಪ್ರತಿಯನ್ನು ಅಚ್ಚಿಗೆ ಸಿದ್ಧಪಡಿಸುವುದರಲ್ಲಿಯೂ ಕರಡುಗಳನ್ನು ತಿದ್ದುವುದರಲ್ಲಿಯೂ ಮಿತ್ರರಾದ ಶ್ರೀ ಡಿ. ಆರ್. ವೆಂಕಟರಮಣನ್ ಮತ್ತು ಶ್ರೀ ಎಸ್. ಆರ್. ರಾಮಸ್ವಾಮಿಯವರು ಎಂದಿನಂತೆ ಸಹಾಯಕರಾಗಿದ್ದಾರೆ. ಇವರಿಗೆ ನಮ್ಮ ಕೃತಜ್ಞತೆಗಳು.

# ಋತ, ಸತ್ಯ, ಧರ್ಮ

೧

ನಾವು ಸಾಮಾನ್ಯವಾಗಿ, 'ಅದು ಸನ್ನ ಪ್ರಕೃತಿ', 'ಇದು ಅವನ ನೈಜ', 'ಇದು ನಿನ್ನ ನೈಜ', ಎನ್ನುತ್ತೇವಲ್ಲವೆ? 'ಸ್ವಭಾವ', 'ನೈಜ'ವೆಂದರೆ ಏನು? ಮನುಷ್ಯನು ಹುಟ್ಟಿನಿಂದಲೇ ಕೆಲವು ಪದಾರ್ಥಗಳನ್ನೂ ಶಕ್ತಿಗಳನ್ನೂ ಗುಣ ಪ್ರವೃತ್ತಿಗಳನ್ನೂ ಪಡೆದುಕೊಂಡಿರುತ್ತಾನೆ. ಅವು ಅವನಿಗೆ ಹೇಗೆ ಬಂದಿರುತ್ತವೆ? ಹೇಗೋ ಬಂದಿರುತ್ತವೆ: ಹಿಂದಿನ ಜನ್ಮದಿಂದ ಬಂದಿರುತ್ತವೆ; ವರವಾಗಿ ಬಂದಿರುತ್ತವೆ; ಪೂರ್ವಕರ್ಮದ ಫಲವಾಗಿ ಬಂದಿರುತ್ತವೆ. ಹೇಗಾದರಾಗಲಿ, ಅವನು ಹುಟ್ಟುವಾಗಲೇ ಅವನ ಜೊತೆಯಲ್ಲಿರುತ್ತವೆ. ಅದೇ ಅವನ ಸ್ವಭಾವ, ಅಥವಾ ಪ್ರಕೃತಿ, ಅಥವಾ ನೈಜ. ದೇಹದ ಕೈ, ಕಾಲು, ಕಣ್ಣು, ಬಾಯಿ ಮೊದಲಾದ ಅವಯವಗಳು, ಅವುಗಳಲ್ಲಿರುವ ಇಂದ್ರಿಯಶಕ್ತಿಗಳು, ಮನಸ್ಸು ಬುದ್ಧಿ ಮೊದಲಾದ ಅಂತರಂಗಶಕ್ತಿಗಳು—ಇವೆಲ್ಲಾ ಒಟ್ಟಿಗೆ ಸೇರಿ ಅವನ ಸ್ವಭಾವ ಅಥವಾ ಪ್ರಕೃತಿ. ಈ ನಾನಾ ಬಹಿರಂಗ ಶಕ್ತಿ ಅಂತರಂಗ ಶಕ್ತಿಗಳಲ್ಲಿ ಪ್ರತಿಯೊಂದರ ಚರ್ಯೆಗಳೂ ಸಾಮಾನ್ಯವಾಗಿ ಮೂರು ವಿಧಗಳಲ್ಲಿ ಯಾವುದಾದರೊಂದು ತೆರನಾಗಿರುತ್ತವೆ:

(೧) ಚೊಕ್ಕಟ, ಒಳ್ಳೆಯದು, ಮಿತವೇಗ—ಸತ್ತ್ವ.

(೨) ಸಾಮಾನ್ಯ, ಹಾಗೂ ಹೀಗೂ, ಅತಿರಭಸ—ರಾಜಸ

(೩) ಕೊಳೆ, ಕೆಡಕು, ಮಂದ—ತಾಮಸ.

ಈ ಮೂರು ವಿಧದ ಗುಣಶಕ್ತಿಗಳೂ ಎಲ್ಲರಲ್ಲಿಯೂ ಇರುತ್ತವೆ—ವಿವಿಧ ಪ್ರಮಾಣಗಳಲ್ಲಿ. ಈ ಪ್ರಮಾಣವೈಷಮ್ಯವು ಸ್ವಾಭಾವಿಕಾಂಶ. ಹೀಗೆ ಗುಣಶಕ್ತಿಗಳೆಲ್ಲ ಹುಟ್ಟಿನಿಂದ ಬಂದವೇ. ಆದರೆ ಮನುಷ್ಯನು ಸ್ವತಂತ್ರಿಸಿ ಮಾಡಬಹುದಾದದ್ದು ಒಂದೂ ಇಲ್ಲವಷ್ಟೆ? ಅವನು ಯಾವುದಕ್ಕೂ ಜವಾಬ್ದಾರನಲ್ಲವಲ್ಲ?

ಎಂದರೆ ಸತ್ತ್ವಾಂಶವಾದ ತಾರತಮ್ಯ ಪ್ರವೃತ್ತಿಗಳು, ವಿವೇಕರೂಪವಾದ ಮನೋಬುದ್ಧಿಗಳು—ಎಲ್ಲರಲ್ಲಿಯೂ—ಕೆಲಕೆಲವರಲ್ಲಿ ಕೆಲಕೆಲವು ಸನ್ನಿವೇಶಗಳಲ್ಲಿ, ಮಿಕ್ಕವರಲ್ಲಿ ಇತರ ವೇಳೆಗಳಲ್ಲಿರುವುದಕ್ಕಿಂತ ಹೆಚ್ಚಾಗಿರುತ್ತವೆ. ಈ ವಿವೇಕ ಶಕ್ತಿಯ ಉತ್ಕರ್ಷಸ್ಥಿತಿಯೇ ನಿಜವಾದ ಪ ಗತಿಕಾರಿ. ಅದೇ

ನಿಜವಾದ ಅಭ್ಯುದಯಕಾರಿ. ಅದೇ ಸತ್ತ್ವಬೀಜ. ಮನುಷ್ಯನಲ್ಲಿ ಅತ್ಯಂತ ಶ್ರೇಯಸ್ಕರವಾದದ್ದು ಅವನ ಸ್ವಂತ ವಿವೇಕ. ಇದು ಯಾರಲ್ಲಿಯೂ ಸಂಪೂರ್ಣ ಅಭಾವವಾಗಿರುವುದಿಲ್ಲ. ಅಲ್ಪಸ್ವಲ್ಪವಾಗಿಯಾದರೂ ಪ್ರತಿಯೊಬ್ಬನಲ್ಲಿಯೂ ಇದ್ದೇ ಇರುತ್ತದೆ. ಅದನ್ನು ಅವನು ಬೆಳಸಿ ಬಲಪಡಿಸಿಕೊಳ್ಳಲಾಗುವಷ್ಟು ಮಟ್ಟಿಗೆ ಅವನು ಸ್ವತಂತ್ರಾಧಿಕಾರಿ. ಅದೇ ಮನುಷ್ಯಪ್ರಾಣಿಗೆ ಇರುವ ಆಶಾವಕಾಶ, ಶ್ರೇಯಃಪ್ರಭಾತಕಿರಣ: ಅವನ ಉಷಃಕಾಲೋದಯ. ಎಂದರೆ ಎಲ್ಲಿ ಋತಶ್ರದ್ಧೆಯನ್ನೂ ಸತ್ಯನಿಷ್ಠೆಯನ್ನೂ ಕಾಣುತ್ತೇವೆಯೋ ಅಲ್ಲಿದೆ ನಮಗೆ ಅರುಣೋದಯ ಪ್ರಭೆ.

೨

ದೇವರು ಅಥವಾ ಭಗವಂತನು, ಎಂದರೆ ಜಗದೀಶ್ವರನು, ಅಥವಾ ಒಂದಾನೊಂದು ಮಹಾ ಚೈತನ್ಯ ಉಂಟೆಂದು ಹಿಂದಿನ (**ದೇವರು** ಎಂಬ) ಲಘು ಪುಸ್ತಕದಲ್ಲಿ ಸಂಕ್ಷೇಪವಾಗಿ ತೋರಿಸಿದೆ. ಆ ದೇವರನ್ನು ಗುರುತಿಸುವ ದಾರಿಗಳು ಎಷ್ಟೋ ರೂಢಿಯಲ್ಲಿವೆ. ಆದರೆ ಯಾವ ಒಂದು ಗುರುತೂ ಆತನನ್ನು ಪೂರ್ತಿಯಾಗಿ ಬಣ್ಣಿಸಲಾರದು. ದೇವರಲ್ಲಿ ಎಲ್ಲ ಗುಣಗಳೂ ಇವೆ; ಪರಸ್ಪರ ವಿರುದ್ಧವಾದವೂ ಇವೆ. ನಮಗೆ ಇಷ್ಟವಾದ ಗುಣಗಳು ಆತನದೆಂದೆನ್ನುತ್ತೇವೆ. ಆತನನ್ನು "ಅಗಣಿತ ಗುಣಗಣ" ಎನ್ನುತ್ತೇವೆ. ಆ "ಅಗಣಿತ ಗುಣ"ದಲ್ಲಿ ನಮಗೆ ಪ್ರಿಯವಾದ ಗುಣಗಳೂ ಸೇರಿರುತ್ತವೆ. ನಾವು ಇವನ್ನು ಪ್ರತ್ಯೇಕಗೊಳಿಸಿ ವಿಶೇಷವಾಗಿ ಹೇಳುತ್ತೇವೆ. ಅಂಥವು ಮುಖ್ಯವಾಗಿ ಮೂರು:

(೧) ಸತ್ = ಇರ್ಕೆ, ಅಸ್ತಿತ್ವ.

(೨) ಚಿತ್ = ಜ್ಞಾನ, ತಿಳಿವು.

(೩) ಆನಂದ = ಸಂತೋಷ.

ಇರ್ಕೆ, ಅಸ್ತಿತ್ವ—ಎಲ್ಲಕ್ಕೂ ಮೊದಲು.

ಒಂದಾನೊಂದು ವಸ್ತು ಇರುವುದು ಮೊದಲು ನಿಜವಾದರಲ್ಲವೆ ಅದನ್ನು ಹುಡುಕಬೇಕಾದದ್ದು? ಇರವೇ ಇಲ್ಲದಿದ್ದರೆ ಅದನ್ನು ಕುರಿತು ಚಿಂತಿಸಬೇಕಾದದ್ದಿಲ್ಲವಷ್ಟೆ. ಹುಸಿಯಾದದ್ದಕ್ಕಾಗಿ ಶ್ರಮವೇಕೆ? ನಿಜವಾಗಿ ಇರುವ ವಸ್ತುವಾದರೆ ಅದನ್ನು ಕುರಿತು ವಿಚಾರಮಾಡಿ ಫಲವುಂಟು.

ಇಲ್ಲಿ 'ಇರುವುದು' ಎಂದರೆ ಸರ್ವಕಾಲಗಳಲ್ಲಿಯೂ ಸರ್ವಸ್ಥಲಗಳಲ್ಲಿಯೂ

ಇರುವುದು. ಅದೇ ಅಸ್ತಿತ್ವ. ಅದರಿಂದಲೇ "ಆಸ್ತಿಕ್ಯ"; ಏನೋ ಇದೆ ಎಂಬ ನಂಬಿಕೆ—ಭಗವಂತ ಎಂಬುದಿದೆ ಎಂಬ ನಂಬಿಕೆ. ಅದು ಒಳ್ಳೆಯದೋ ಕೆಟ್ಟದ್ದೋ ಉಭಯವೋ, ಏನೋ ಒಂದು ಇರುವುದಂತೂ ನಿಜ. ಅದನ್ನು ನಾವು ಒಲಿಸಿಕೊಳ್ಳಬಯಸುವುದೂ ನಿಜ. ಯಾವುದೋ ಒಂದು ಸರ್ವಶಕ್ತವಾದದ್ದು ಇದೆ, ಅದು ನಮ್ಮ ಬೇಡಿಕೆಗಳನ್ನು ಕೇಳಿ ನಡಸಬಲ್ಲದ್ದಾಗಿದೆ. ಇಷ್ಟೇ ಮೊದಲು ಮನುಷ್ಯನ ಮನಸ್ಸಿನಲ್ಲಿ ಉದಿಸುವ ಭಾವನೆ. ಈ ಭಾವನೆ ಸ್ವತಃ ತಾನಾಗಿ ಹುಟ್ಟುತ್ತದೆ. ಅದು ಯಾರ ಬಲವಂತದಿಂದಲಾಗಲಿ ದಾಕ್ಷಿಣ್ಯ ದಿಂದಲಾಗಲಿ ಹುಟ್ಟುವುದಲ್ಲ. ಆದದ್ದರಿಂದ ಅದು ಋತ. ಋತವೇ ಮೊದಲ ನಂಬಿಕೆ. ಅದರಿಂದ ಬರುವುದು, 'ದೇವರು ಸರ್ವೋದಾರಿ, ಸರ್ವಶಕ್ತ' ಮೊದಲಾದ ಇತರ ನಂಬಿಕೆಗಳು.

ಮೊದಲು ಮನಸ್ಸು ತಾನೇ ಸ್ವತಂತ್ರವಾಗಿ ಮಾಡುವ ಕಾರ್ಯ 'ಋತ'. ಆಮೇಲೆ ಅದನ್ನು ಇತರರ ಹೇಳಿಕೆ ದೃಢಪಡಿಸುತ್ತದೆ. ಈ ಸಮರ್ಥನ ಪ್ರಮಾಣಗಳು ಸತ್ಯ. ಎಂದರೇನಾಯಿತು? ಋತವೂ ಸತ್ಯವೂ ಒಟ್ಟು ಗೂಡಿದರೆ ನಂಬಿಕೆ ಸ್ಥಿರವಾಯಿತು. ನಡವಳಿಕೆ ನಿಶ್ಚಿತವಾಯಿತು. ಋತ ವೆಂದರೆ ಸೈಜಪ್ರವೃತ್ತಿ, ಸ್ವತಂತ್ರವಾದ ನಡವಳಿಕೆ, ಸ್ವಭಾವಾಭಿವ್ಯಕ್ತಿ. 'ಋ' ಎಂಬುದು ಗತಿ ಎಂಬರ್ಥದಲ್ಲಿ; ಗತಿ ಎಂದರೆ ಚಲನೆ. ಮನುಷ್ಯನ ಬದುಕಿನಲ್ಲಿ ದಿನದಿನವೂ ಹೊಸ ಹೊಸ ಸಂದರ್ಭಗಳೂ ಹೊಸ ಹೊಸ ಸನ್ನಿವೇಶಗಳೂ ಬರುತ್ತಿರುವವಷ್ಟೆ. ಅವು ಹೊಸ ಹೊಸ ಪ್ರಶ್ನೆಗಳನ್ನು ಎಬ್ಬಿಸುತ್ತವೆ. ಅಂಥ ಒಂದು ಹೊಸ ಪ್ರಶ್ನೆ ಅಥವಾ ಹೊಸ ಸಂದರ್ಭವೆದ್ದಾಗ ಮನುಷ್ಯನು ಮೊದಲು ತನ್ನ ಮನಸ್ಸಿನ ಒಳಗಡೆ ತಾನಾಗಿ ಹೇಗೆ ಉತ್ತರ ಕೊಡುತ್ತಾನೆ? ಇತರರ ಪ್ರೇರಣೆಯಿಲ್ಲದೆ, ಅನ್ಯಪ್ರಭಾವವಿಲ್ಲದೆ, ತಾನೂ ಯೋಚನೆ ಮಾಡದೆ, ತರ್ಕಿಸದೆ, ತಕ್ಷಣ ಏನು ಜವಾಬು ಕೊಡುತ್ತಾನೆ? ಈ ಮೂಲ ಪ್ರತಿಕ್ರಿಯೆಯೇ ಅವನ 'ಋತ'.

ಹೀಗೆ ಅವನು ತಾನಾಗಿ ತನಗೆ ಕೊಟ್ಟುಕೊಂಡ ಉತ್ತರವನ್ನು ಆ ಬಳಿಕ ಇತರರು ತನಗೆ ಕೊಟ್ಟ ತಿಳಿವಳಿಕೆ ಸಲಹೆಗಳೊಡನೆ ಹೋಲಿಸಿ ನೋಡಿ, ತನ್ನ ಹೊರಗಿನ, ಅನ್ಯರು ಹೇಳುವ ವರದಿಗೂ ತನ್ನೊಳಗಿನ ಋತಕ್ಕೂ ಹೊಂದಾ ವಣೆಯನ್ನು ಮಾಡಿಕೊಂಡು ತಯಾರು ಮಾಡುವ ನಿಶ್ಚಯವೇ 'ಸತ್ಯ'.

ಹೀಗೆ ಋತವೆಂಬುದು ಸತ್ಯವೆಂಬ ವೃಕ್ಷದ ಆದಿಮೂಲ. ಋತವೇ ಲೋಕ ಸಂಪರ್ಕದಿಂದ ಸತ್ಯವಾಗುತ್ತದೆ. ಸತ್ಯವು ನಮ್ಮ ಜೀವನಕ್ಕೆ ಬೇಕಾಗಿರುವ ಜ್ಞಾನಸಂಪತ್ತಿನಲ್ಲಿ ಪ್ರಥಮಾಂಶ. ಋತ ಸತ್ಯಕ್ಕೆ ಆದಿ.

ಹೀಗೆ ಋತ ಸತ್ಯಗಳೆರಡೂ ನಂಬಿಕೆಗೆ ಆಧಾರಗಳು. ಋತ ಸತ್ಯಗಳಿಗೊಪ್ಪಿಗೆಯಾಗದ ಮಾತೂ ಕೆಲಸವೂ ಅಬದ್ಧ, ಸುಳ್ಳು, ಹುಸಿ. ಸುಳ್ಳನ್ನು ಸರಿಸಿದ್ದು ಸುಳ್ಳೇ ಆದೀತು. ಅಸತ್ಯದಿಂದ ವಿನಾಶ. ಈ ಕಾರಣದಿಂದಲೇ:

ಸತ್ಯಾನ್ನಾಸ್ತಿ
ಪರೋ ಧರ್ಮಃ

—ಎಂಬ ಪೂರ್ವಿಕವಾಕ್ಯ.

ಸತ್ಯದ ಮೂಲಸ್ವರೂಪ ಋತ. ಋತದಿಂದ ಸತ್ಯ. ಸತ್ಯವೆಂಬುದು ಋತದ ಸಮೃದ್ಧ ದಶೆ (Development).

೩

ಸೃಷ್ಟಿಯಲ್ಲಿ—ಅದರ ನಾನಾ ಆಕಾರವಿಕಾರಗಳ ಹಿಂದುಗಡೆ—ಒಂದಾನೊಂದು ಅವಿಕಾರ್ಯವಾದ ನಿಯಮ ಅಥವಾ ಕ್ರಮ ಉಂಟೆಂಬ ನಂಬಿಕೆ ವೇದಗಳಲ್ಲಿ ಮೊದಲಿನಿಂದಲೂ ಇದ್ದಂತೆ ತೋರಿಬರುತ್ತದೆ. ಸೂರ್ಯೋದಯ ಸೂರ್ಯಾಸ್ತಗಳಲ್ಲಿ, ಚಂದ್ರನ ವೃದ್ಧಿಕ್ಷಯಗಳಲ್ಲಿ, ಋತುಗಳ ಪರ್ಯಾಯಗತಿಯಲ್ಲಿ, ಒಂದಾನೊಂದು ಕ್ಲೃಪ್ತಿ ಅಥವಾ ಗೊತ್ತಾದ ಏರ್ಪಾಟು ಕಾಣಬರುವುದನ್ನು ಮಹರ್ಷಿಗಳು ಗಮನಕ್ಕೆ ತಂದುಕೊಂಡಿದ್ದರು. ಹಾಗೆಯೇ ಜೀವರಾಶಿಗಳ ಅಭಿವೃದ್ಧಿಕ್ರಮದಲ್ಲಿ ಒಂದು ನಿಯತಿ ಇದ್ದಂತೆ, ಅವರಿಗೆ ಗೋಚರಿಸಿತ್ತು. ಹುಲ್ಲಿನಿಂದ ಹುಲ್ಲು, ಮರವಲ್ಲ; ಮಾವಿನಿಂದ ಮಾವು, ಬೇವಲ್ಲ; ಮನುಷ್ಯನಿಂದ ಮನುಷ್ಯ, ಮರವಲ್ಲ, ಮೃಗವಲ್ಲ; ಮೃಗದಿಂದ ಮೃಗ, ಮನುಷ್ಯನಲ್ಲ, ಗಿಡವಲ್ಲ—ಹೀಗೆ ಸಂತಾನಕ್ರಮದಲ್ಲಿ ಒಂದು ವಂಶ ನಿಯಮ ಉಂಟೆಂಬುದು ಅವರ ದೃಷ್ಟಿಗೆ ಬಂದಿತ್ತು. ಹಾಗೆಯೇ ಭೂಮಿ, ನೀರು, ಬೆಂಕಿ ಮೊದಲಾದ ಮಹಾಭೂತಗಳ ಕಾರ್ಯದಲ್ಲಿಯೂ ನಿಯತಿಯುಂಟೆಂಬುದನ್ನೂ ಅವರು ಕಂಡುಕೊಂಡಿದ್ದರು. ನೀರು ಸುಡಲಾರದು, ಬೆಂಕಿ ತಣುವು ಮಾಡಲಾರದು, ವಾಯು ನಿಂತಿರಲಾರದು, ನೆಲ ಚಲಿಸಲಾರದು. ಒಂದೊಂದು ಭೂತಕ್ಕೂ ಒಂದೊಂದು ನಿರ್ದಿಷ್ಟ ಕರ್ತವ್ಯವುಂಟು.

ಹೀಗೆ ಚರಾಚರ ಜಗತ್ತಿನ ಸ್ಥಿತಿ ಚಲನೆಗಳಲ್ಲಿ ಕಾಣಬರುವ ಕಟ್ಟುಪಾಡನ್ನು ವೇದದಲ್ಲಿ "ಋತ" ಎಂಬ ಹೆಸರಿನಿಂದ ಕರೆದಿರುವಂತೆ ತೋರುತ್ತದೆ. ಋತವೆಂದರೆ ಜಗತ್ತಿನ ನಾನಾ ವ್ಯಾಪಾರ ವ್ಯವಹಾರಗಳಲ್ಲಿರುವ ಒಂದು ಗೊತ್ತಾದ ಮತ್ತು ತಪ್ಪಿಸಿಕೊಳ್ಳಲಾಗದ ಮತ್ತು ಬದಲಾಯಿಸದಿರುವ ಕಾರಣ—

ಕಾರ್ಯಾನುಬಂಧ. ಬಿತ್ತಿದ್ದು ಬೆಳೆ; ಅಟ್ಟದ್ದು ಊಟ. ಈ ಕಾರಣ-ಕಾರ್ಯ ಸಂಬಂಧವೇ, ಇಂಥ ಸಾಂತತ್ಯವೇ ಋತ.

ಪ್ರತಿಯೊಂದು ವಸ್ತುವಿನಲ್ಲೂ "ಆತ್ಮ" ಎಂಬೊಂದು ವಸ್ತು ಅಂತರ್ಭೂತ ವಾಗಿರುತ್ತದೆಂದಲ್ಲವೆ ವೈದಿಕ ಮತದ ಮೂಲ ಭಾವನೆ? ಆತ್ಮವು "ಅಹಂ", "ಅಹಂ" (ನಾನು, ನಾನು) ಎಂದುಕೊಳ್ಳುತ್ತಿರುವ ಜೀವಮೂಲ. ಆ ಆತ್ಮ ವಸ್ತುವಿನಲ್ಲಿ ಸತ್ತು, ಚಿತ್ತು, ಆನಂದ (ಇರೋಣ, ಅರಿವು, ನಲಿವು) ಎಂಬ ಮೂರು ಗುಣಗಳು ಸ್ವತ ಏವ ಇರುತ್ತವೆ. (ಇವು ದೇವರಲ್ಲಿರುವ ಗುಣಗಳೆಂದು ಮೇಲೆ ತೋರಿಸಿದೆ.) ಚಿತ್ತು (ಅರಿವು) ಎಂಬುದೇ ಸಮಸ್ತ ಲೋಕವ್ಯವಹಾರ ಗಳಿಗೂ ಆದಿಕಾರಣ. ಚಿತ್ತೇ ಚೈತನ್ಯ. ಆ ಚಿದಂಶದ ಸ್ವತಃಸ್ಫುರಣೆಯೇ ಋತ. ಅದು ಆತ್ಮದ ಸ್ವಯಂಕೃತ—ಆತ್ಮದ ಸ್ವತಶ್ಚಲಿತ.

ಈ ಋತದ ಭಾವನೆಯಿಂದ ಹುಟ್ಟಿಬಂದಿರುವುದು ಸತ್ಯದ ಭಾವನೆ. ಯಾವುದು ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ಏಕರೂಪವಾಗಿರುತ್ತದೆಯೋ ಅದು ಋತ. "ಋ" ಅಂದರೆ ನಡೆಯುವುದು ("ಋ" ಗತೌ–ಜುಹೋತ್ಯಾದಿ). ಹಾಗೆಂದರೆ ಅನ್ಯಪ್ರೇರಣೆಯನ್ನಪೇಕ್ಷಿಸದೆ, ಅನ್ಯನಿರ್ಬಂಧವಿಲ್ಲದೆ, ತಾನೇ ತಾನಾಗಿ ಆದ ನಡವಳಿಕೆ ಅಥವಾ ಸಂಗತಿ. ಅದೇ ನೈಜ ಅಥವಾ ಸಹಜ. ಅದನ್ನು ಇತರರು ಬದಲಾಯಿಸುವಂತಿಲ್ಲ. ಅದೇ ಪ್ರಾಣಿಯ ಸಮಸ್ತ ವ್ಯಾಪಾರ ವರ್ತನೆಗಳಿಗೂ ಮೂಲವಾದದ್ದು. ಗಿಡಕ್ಕೆ ಬೀಜ ಹೇಗೋ ಪ್ರಾಣಿಗೆ ಋತ ಹಾಗೆ. ಪ್ರಾಣಿಯ ಗುಣಶಕ್ತಿಸರ್ವಸ್ವವೂ ಋತವೆಂಬುದ ರಲ್ಲಿ ಅಡಗಿಕೊಂಡಿರುತ್ತದೆ.

ಋತ ಹೀಗೆ ಸರ್ವಕಾಲಗಳಲ್ಲೂ ಇರತಕ್ಕದ್ದಾದದ್ದರಿಂದ ಅದು ಸತ್ಯ. ಸತ್ಯವೆಂದರೆ ಇರುವ ಸಾಮರ್ಥ್ಯವುಳ್ಳದ್ದು, ಎಂದರೆ ಕಾಲಭೇದ ದೇಶಭೇದ ಗಳಿಂದ ರೂಪುಗೆಡದೆ ಇರತಕ್ಕ ಸ್ಥಿತಿ. ಅಸ್=ಸತ್ ("ಅಸ್" ಭುವಿ) ಎಂದರೆ ಇರೋಣ. ಯಾವುದಕ್ಕೆ ಸಂತತವಾದ ಇರುವಿಕೆಯುಂಟೋ ಅದು ಸತ್ಯ. ಇರುವಿಕೆ ಹೇಗುಂಟೋ ಅದರ ಹೇಳಿಕೆ—ಇದ್ದದ್ದನ್ನು ಇದ್ದಂತೆ ಹೇಳಿದ್ದು– ಯಥಾರ್ಥ, ತಥ್ಯ. ಋತದ ವಾಗ್ರೂಪ ಸತ್ಯ; ಸತ್ಯದ ಕ್ರಿಯಾ ರೂಪ ಧರ್ಮ.

ಧರ್ಮವೆಂದರೆ ಒಂದಾನೊಂದು ವಸ್ತುವನ್ನು ಆ ವಸ್ತುವನ್ನಾಗಿ ಧರಿಸಿರುವ —ಎಂದರೆ ಉಳಿಸಿರುವ ಗುಣ ಅಥವಾ ಲಕ್ಷಣ ("ಧೃಞ್" ಧಾರಣೇ). ಅದೇ ಅದರ ತತ್ತ್ವ—(ತತ್+ತ್ವ), ಅದರ ಅದಾಗಿರುವಿಕೆ. ನಾಲಗೆಯಲ್ಲಿ ನೀರನ್ನೂರಿಸುವುದು ಉಪ್ಪಿನ ತತ್ತ್ವ– ಅದರ ಧರ್ಮ. ಮುಟ್ಟಿದ್ದನ್ನು

ಸುಡುವುದು ಬೆಂಕಿಯ ತತ್ತ್ವ, ಅದರ ಧರ್ಮ. ಹಾಗೆಯೇ ಹುಲ್ಲು ಮೇಯುವುದು ಹಸುವಿನ ಧರ್ಮ, ಮಾಂಸ ತಿನ್ನುವುದು ಹುಲಿಯ ಧರ್ಮ. ಅದೇ ರೀತಿ ಅಂಗಚೇಷ್ಟೆ ಕಪಿಯ ಧರ್ಮ, ಗಂಭೀರವಾಗಿರುವುದು ಸಿಂಹದ ಧರ್ಮ. ಮನುಷ್ಯರಲ್ಲಿಯೂ ಹೀಗೆಯೇ ಒಂದೊಂದು ವಂಶಕ್ಕೆ ಒಂದೊಂದು ವಿಶೇಷ ಲಕ್ಷಣ; ಒಬ್ಬೊಬ್ಬನದು ಒಂದೊಂದು ವಿಶೇಷ ಧರ್ಮ.

ಮನುಷ್ಯಪ್ರಾಣಿಯ ವಿಷಯದಲ್ಲಿ ಧರ್ಮನಿರ್ಣಯ ಇತರ ಪ್ರಾಣಿಗಳ ವಿಷಯದಲ್ಲಿರುವಷ್ಟು ಸುಲಭವಲ್ಲ. ಏಕೆಂದರೆ ಮನುಷ್ಯನ ಮನಸ್ಸು ಇತರ ಪ್ರಾಣಿಗಳ ಮನಸ್ಸಿಗಿಂತ ಹೆಚ್ಚು ಶಕ್ತಿವಂತವಾದದ್ದು, ಮತ್ತು ಹೆಚ್ಚು ಸ್ವಾತಂತ್ರ್ಯವುಳ್ಳದ್ದು. ಅದು ಸ್ವತ ಏವ ನಾಲ್ಕಾರು ರೂಪಗಳನ್ನು ತಾಳಿ ಕೊಳ್ಳುತ್ತದೆ. ಆದದ್ದರಿಂದ ಅದರಲ್ಲಿ ಧರ್ಮಸಾಂಕರ್ಯ ಸುಲಭವಾಗಿ ನಡೆಯು ತ್ತದೆ. ಈ ಸಾಂಕರ್ಯಕ್ಕೆ ಸಿಕ್ಕದೆ ಅದರಿಂದ ತಪ್ಪಿಸಿಕೊಳ್ಳುವುದು ಮನುಷ್ಯನಿ ಗಿರುವ ಕರ್ತವ್ಯ. ಇದೇ ಭಗವದ್ಗೀತಾದಿ ಶಾಸ್ತ್ರಗಳಲ್ಲಿರುವ ಸ್ವಧರ್ಮೋಪ ದೇಶದ ಹಿನ್ನೆಲೆ.

ಹೀಗೆ "ಋತ", "ಸತ್ಯ", "ಧರ್ಮ"—ಈ ಮೂರೂ ಅರ್ಥದಲ್ಲಿ ಅನ್ಯೋನ್ಯ ಸಂಬದ್ಧವಾದ ಮಾತುಗಳು. ಹಿಂದೂ ಜನದಲ್ಲಿ "ಧರ್ಮ" ಎಂಬ ಭಾವನೆಯೂ ಆ ಪದವೂ ಪ್ರಚುರವಾಗಿರುವುದಕ್ಕಿಂತ ಹೆಚ್ಚಾಗಿ ಯಾವ ಜನದಲ್ಲಿಯೂ ಯಾವ ಭಾವನೆಯೂ ಯಾವ ಪದವೂ ಬಳಕೆಯಲ್ಲಿ ಇರಲಾರವೆಂದು ತೋರುತ್ತದೆ. ಧರ್ಮವೆಂಬುದು ಹಿಂದೂ ಜೀವನನೀತಿಯನ್ನು ಸಂಗ್ರಹಮಾಡಿಕೊಂಡಿರುವ ಏಕಪದ. ಈ ಧರ್ಮದ ಅಡಿಪಾಯ ಋತ.

೪

ಋತದ ಭಾವನೆಯಲ್ಲಿ ಮೂರುನಾಲ್ಕು ಪದರಗಳಿರುವಂತೆ ತೋರುತ್ತದೆ.

(೧) ಜಗತ್ತಿನಲ್ಲಿ ಒಂದು ಕ್ರಮ ಅಥವಾ ವ್ಯವಸ್ಥೆ.

(೨) 'ಅವಶ್ಯಂಭಾವಿ'ಯಾದ ಕರ್ಮ-ಫಲಸಂಬಂಧ ಮತ್ತು ಋಣ-ಋಣಿ ಸಂಬಂಧ. ಕಾರಣವಿದ್ದಲ್ಲಿ ಕಾರ್ಯ ಉಂಟೇ ಉಂಟು; ಬೇರಿದ್ದಲ್ಲಿ ಮೊಳಕೆ ಉಂಟೇ ಉಂಟು; ಕರ್ಮಶೇಷವಿದ್ದಲ್ಲಿ ಶುಭಾಶುಭಪ್ರಾಪ್ತಿ ಉಂಟೇ ಉಂಟು.

(೩) ಸ್ವಭಾವ ವಿಕಾಸ: ಪ್ರತಿಯೊಬ್ಬ ಜೀವಿಯಲ್ಲಿಯೂ ಪ್ರತಿಯೊಂದು ಭೂತದಲ್ಲಿಯೂ ಯಾವುದೋ ಒಂದು ಗುಣಶಕ್ತಿಸಂಚಯ ಹುದುಗಿಕೊಂಡಿರು

ತ್ತದೆ. ಅದೇ ಅದರ ಸಹಜ ಅಥವಾ ನೈಜ. ಈ ನೈಜ ಅನಾದಿಯಾದದ್ದು. ನೈಜವು ಜೀವದ ಜನ್ಮಜನ್ಮಾಂತರಗಳಲ್ಲಿ ಪರಿಣಾಮ ವಿಪರಿಣಾಮಗಳನ್ನು ಪಡೆದುಕೊಂಡು ಬಂದಿರುತ್ತದೆ. ಅದರ ಬೆಳವಣಿಗೆ ಮರದ ಬೆಳವಣಿಗೆಯಂತೆ. ಒಂದು ಮರಕ್ಕೂ ಅದರಿಂದಲೇ ಹುಟ್ಟಿದ ಮತ್ತೊಂದು ಮರಕ್ಕೂ ಗಾತ್ರ ದಲ್ಲಿಯೂ ಕೊಂಬೆಗಳ ಉದ್ದ ಸೊಟ್ಟುಗಳಲ್ಲಿಯೂ ಎಲೆಗಳ ಸಂಖ್ಯೆಯಲ್ಲಿಯೂ ವ್ಯತ್ಯಾಸ ತೋರಬಹುದು; ಆದರೆ ಕಾಷ್ಠದ ಒಳರಚನೆ, ಹಣ್ಣಿನ ರುಚಿ— ಇದರಲ್ಲಿ ವ್ಯತ್ಯಾಸ ತೋರದು. ಮನುಷ್ಯನ ನೈಜವೆಂಬುದೂ ಹಾಗೆಯೇ; ಎಷ್ಟೋ ಅಂಶಗಳಲ್ಲಿ ಬದಲಾಯಿಸಬಹುದು; ಮುಖ್ಯಾಂಶದಲ್ಲಿ ಮಾತ್ರ ಬದಲಾಯಿಸಲಾರದು. ಮನುಷ್ಯನ ನಡವಳಿಕೆಯ ನಿಯಮವು ಅಥವಾ ಧರ್ಮವು ಹಿತಕರವಾಗಬೇಕಾದರೆ ಮೊದಲು ಆ ನಿಯಮ ಆ ಜೀವದ ನೈಜಕ್ಕೆ ಒಗ್ಗುವಂಥಾದ್ದಾಗಿರಬೇಕು. ಸ್ವಭಾವಕ್ಕೆ ವಿರೋಧವಾದ ನಿಯಮ ಪ್ರಯೋಗಸಾಧ್ಯವಾಗಲಾರದು, ಅತ ಏವ ಪ್ರಯೋಜನಕರವಾಗಲಾರದು. ಧರ್ಮವೆಂಬುದು ಕವಚದಂತೆ. ಅದು ದೇಹದ ಅವಯವರೇಖೆಯನ್ನು ಅನುಸರಿಸಿದ್ದಲ್ಲಿ ಹಿತಕರವಾಗಿರುತ್ತದೆ. ಹಾಗೆಯೇ ಧರ್ಮನಿಯಮ ಧರ್ಮಿಯ ಯೋಗ್ಯತೆಗೆ ತಕ್ಕಂತೆ ಇದ್ದರೆ ಅದು ಸುಲಭವಾಗಿ ಅಭ್ಯಸನೀಯವಾಗುತ್ತದೆ. ಹೀಗೆ ಋತದ ತತ್ತ್ವವನ್ನು ಅನುಸರಿಸಿರುವುವು ಧರ್ಮಶಾಸ್ತ್ರಗಳು.

(೪) ಪುಣ್ಯಕಾರ್ಯ—ಯಜ್ಞಯಾಗಾದಿ ದೇವಪೂಜಾವಿಧಾನಗಳು ಮತ್ತು ಯಜ್ಞಸಾಮಗ್ರಿಯಾದ ನೀರು, ಬೆಂಕಿ ಮೊದಲಾದ ಪವಿತ್ರ ದ್ರವ್ಯ ಗಳು. ಇವಕ್ಕೂ ಋತವೆಂಬ ಹೆಸರು ಪರಂಪರಾಕ್ರಮದಿಂದ ಬಂದಿರುತ್ತದೆ.

೫

"ಋತ" ಶಬ್ದಕ್ಕೆ ಇನ್ನೂ ಕೆಲವು ಅರ್ಥಗಳಿವೆ:—

(೧) ಯಜ್ಞ (೨) ಉಂಛಶೀಲ (ಕಾಡಿನಲ್ಲಿ ತಾನಾಗಿ ಉದುರಿದ ಧಾನ್ಯ ವನ್ನಾರಿಸಿ ಆಹಾರಮಾಡಿಕೊಳ್ಳುವುದು) (೩) ನೀರು (೪) ಸೂರ್ಯ (೫) ವಿಷ್ಣು (೬) ರುದ್ರ (೭) ಋಷಿಪ್ರಭೇದ. ಹೀಗೆ ಒಂದರಿಂದೊಂದಾಗಿ ಅರ್ಥಗಳು ಹುಟ್ಟಿಕೊಂಡಿವೆ. ಆದರೆ "ಋತ" ಶಬ್ದದ ಬಹಳ ಹಿಂದಿನ ಅರ್ಥ, "ಸ್ವಾಭಾವಿಕ ಸಂಗತಿ" ಅಥವಾ ಸತ್ಯಬೀಜ, ಮತ್ತು ಅಂಥಾ ಸಂಗತಿಯಿಂದ ಆಗತಕ್ಕ ಪರಿಣಾಮ ಅಥವಾ ಕರ್ಮಫಲನಿಯಮ ಎಂದಿರಬೇಕೆಂದು ತೋರುತ್ತದೆ.

೬

ನಮ್ಮ ದಿನಚರಿಯ ಸಾಮಾನ್ಯ ಭಾಷೆಯಲ್ಲಿ "ಸತ್ಯ" ಎಂಬ ಮಾತಿನಷ್ಟು ಹೆಚ್ಚಾಗಿ "ಋತ" ಎಂಬ ಮಾತು ಬಾರದಿದ್ದರೂ "ಅನೃತ" ಎಂಬುದು ಮಾತ್ರ "ಅಸತ್ಯ" ಎಂಬುದಕ್ಕೆ ಸಮಾನಪದವಾಗಿ ರೂಢಿಯಲ್ಲಿದೆ. ಋತ ವಲ್ಲದ್ದು ಅನೃತ, ಸುಳ್ಳು. ವೇದದಲ್ಲಿ "ಋತ", "ಸತ್ಯ" ಎಂಬ ಪದಗಳನ್ನು ಒಂದಕ್ಕೊಂದು ಸಂವಾದಿಯೆನ್ನುವಂತೆ—ಅವೆರಡೂ ಭಿನ್ನಾರ್ಥಕ ಪದ ಗಳಾಗಿ, ಪರಸ್ಪರ ಪರಿಪೂರಕಗಳಾಗಿವೆ ಎನ್ನುವಂತೆ—ಜೊತೆ ಜೊತೆಯಾಗಿ ಉಪಯೋಗಿಸಿದೆ. ಉದಾಹರಣೆ:—

"ಋತಂ ವದಿಷ್ಯಾಮಿ ಸತ್ಯಂ ವದಿಷ್ಯಾಮಿ ||"
"ಋತಂ ತಪಃ ಸತ್ಯಂ ತಪಃ ||"
"ಋತಂ ಸತ್ಯಂ ಪರಂ ಬ್ರಹ್ಮ ||"
"ಋತಂ ತ್ವಾ ಸತ್ಯೇನ ಪರಿಷಿಂಚಾಮಿ ||"— ಇತ್ಯಾದಿ.

ಹಾಗಾದರೆ ಋತಕ್ಕೂ ಸತ್ಯಕ್ಕೂ ಇರುವ ಅರ್ಥಭೇದವೇನು? ಶಂಕರಾಚಾರ್ಯರು ಈ ರೀತಿ ಅಭಿಪ್ರಾಯಪಟ್ಟಿದ್ದಾರೆ:

"ಋತಂ ಯಥಾಶಾಸ್ತ್ರಂ ಯಥಾಕರ್ತವ್ಯಂ ಬುದ್ಧ್ಯಾ ಸುಪರಿನಿಶ್ಚಿತಮರ್ಥಂ || ಸತ್ಯಮಿತಿ ಸ ಏವ ವಾಕ್ಕಾಯಾಭ್ಯಾಂ ಸಂಪಾದ್ಯಮಾನಃ ||"

[ಶಾಸ್ತ್ರಾನುಸಾರವಾಗಿಯೂ ನಡತೆಯ ಸಂದರ್ಭಕ್ಕನ್ವಯಿಸುವಂತೆಯೂ ಮನಸ್ಸಿನೊಳಗಡೆ ಚೆನ್ನಾಗಿ ಆಲೋಚಿಸಿ ಬುದ್ಧಿಯೊಳಗಡೆ ಮಾಡಿಕೊಂಡ ನಿಶ್ಚಯ "ಋತ." ಅದೇ ನಿಶ್ಚಿತಾರ್ಥವು ಮಾತಿನಲ್ಲಿಯೂ ಕೆಲಸದಲ್ಲಿಯೂ ರೂಪುಗೊಂಡು ಬಂದಾಗ ಅದು "ಸತ್ಯ."]

ಸಾಯಣಾಚಾರ್ಯರ ವ್ಯಾಖ್ಯಾನ ಹೀಗಿದೆ:—

"ಋತಂ ಮನಸಾ ಯಥಾರ್ಥವಸ್ತುಚಿಂತನಂ | ಸತ್ಯಂ ವಾಚಾ ಯಥಾರ್ಥಭಾಷಣಂ ||"

[ಮನಸ್ಸಿನಲ್ಲಿ ಯಥಾರ್ಥವನ್ನು ಕುರಿತ ಚಿಂತನೆ "ಋತ". ಮಾತಿನಿಂದ ನುಡಿದ ಯಥಾರ್ಥವರ್ಣನೆ "ಸತ್ಯ".]

"ಸತ್ಯಂ ಅಬಾಧ್ಯಂ | ಸತ್ಯತ್ವಂ ಚ ದ್ವಿವಿಧಂ ವ್ಯಾವಹಾರಿಕಂ ಪಾರಮಾರ್ಥಿಕಂ ಚ | ಹಿರಣ್ಯಗರ್ಭರೂಪಂ ವ್ಯಾವಹಾರಿಕಂ ಸತ್ಯಂ| ತನ್ನಿರಾಕ-

ರಣೇನ ಪಾರಮಾರ್ಥಿಕಂ ಸತ್ಯಂ| ಪ್ರತಿಪಾದಯಿತುಂ ಋತಂ ಸತ್ಯಮಿತಿ ವಿಶೇಷ್ಯತೇ | ಅತ್ಯಂತಂ ಸತ್ಯಮಿತ್ಯರ್ಥಃ |"

[ಸತ್ಯವು ಬಾಧಿಸಲಶಕ್ಯವಾದದ್ದು. ಆ ಸತ್ಯವೆಂಬುದು ಎರಡು ಬಗೆ: ಒಂದು ವ್ಯಾವಹಾರಿಕ, ಒಂದು ಪಾರಮಾರ್ಥಿಕ. ಸೃಷ್ಟಿಕರ್ತನಾದ ಚತುರ್ಮುಖಬ್ರಹ್ಮ ಮೊದಲಾಗಿ ಎಲ್ಲ ಜಗದ್ವ್ಯಾಪಾರವೂ ವ್ಯವಹಾರಕ್ಕೆ ಸಂಬಂಧಪಟ್ಟದ್ದು. ಇದರಲ್ಲಿಯ ಯಥಾರ್ಥವು ವ್ಯಾವಹಾರಿಕ "ಸತ್ಯ"ವೆಂದೆನಿಸಿಕೊಳ್ಳುತ್ತದೆ. ವ್ಯವಹಾರ ವಿಚಾರವನ್ನು ಬೇರೆಯಾಗಿಟ್ಟು, ಕೇವಲ ಪರಮಾರ್ಥವನ್ನೇ ತೆಗೆದುಕೊಂಡಾಗ ಅಲ್ಲಿಗೆ ಸಂಬಂಧಪಟ್ಟ ಯಥಾರ್ಥವು "ಋತ"ವೆನಿಸಿಕೊಳ್ಳುತ್ತದೆ. ಹೀಗೆ ಋತವು ಸತ್ಯದ ಒಂದು ವಿಶೇಷ ದಶೆ. ಸತ್ಯದ ಅತ್ಯಂತ ನೈಜರೂಪವೇ ಅದು. ಸತ್ಯದ ಆದಿಮೂಲರೂಪವೇ "ಋತ".]

ಸಾಯಣಾಚಾರ್ಯರು ಇನ್ನೊಂದು ಕಡೆ ಹೀಗೆ ಹೇಳುತ್ತಾರೆ:—

ವಿವಕ್ಷಿತಸ್ಯ ವಿದ್ಯಮಾನಾರ್ಥಸ್ಯ ಆದೌ ಮನಸಾ ಪರ್ಯಾಲೋಚನಾ ಋತ ವದನಂ| ಪಶ್ಚಾದ್ವಚಸೋಚ್ಚಾರಣಂ ಸತ್ಯವದನಮಿತಿ ತಯೋರ್ವಿವೇಕಃ ||

[ಹೇಳಬೇಕೆಂದಿರುವ ವಸ್ತುಸ್ಥಿತಿಯನ್ನು ಮೊದಲು ಮನಸ್ಸಿನಲ್ಲಿ ಪರ್ಯಾಲೋಚಿಸಿದಾಗ ಒಳಗೆ ತೋರುವುದು "ಋತ"; ಆಮೇಲೆ ಬಾಯಿಂದ ಉಚ್ಚಾರಣೆಮಾಡಿದಾಗ ಹೊರಕ್ಕೆ ಹೊರಡುವುದು "ಸತ್ಯ". ಇದು ಅವೆರಡಕ್ಕೂ ಇರುವ ವ್ಯತ್ಯಾಸ.]

"ಋತ" ಶಬ್ದವು ಬಹುಶಃ "ಸತ್ಯ" ಎಂಬ ಶಬ್ದಕ್ಕಿಂತಲೂ ಪ್ರಾಚೀನವಾದದ್ದಾಗಿದ್ದರೂ ಇರಬಹುದು. ಶಂಕರಾಚಾರ್ಯರವರ ಕಾಲಕ್ಕೆ "ಸತ್ಯ" ಎಂಬ ಪದವು "ಋತ" ಎಂಬುದಕ್ಕಿಂತ ಹೆಚ್ಚು ಬಳಕೆಯಲ್ಲಿಯೂ, ಆದರೆ ಅಸತ್ಯ ಎಂಬ ಶಬ್ದಕ್ಕಿಂತ "ಅನೃತ" ಎಂಬುದು ಹೆಚ್ಚು ಬಳಕೆಯಲ್ಲಿಯೂ ಇದ್ದಿರಬಹುದೆಂದು ಊಹೆಮಾಡಲು ಒಂದು ಕಾರಣ ತೋರುತ್ತದೆ. ಬ್ರಹ್ಮಸೂತ್ರ ಭಾಷ್ಯದಲ್ಲಿ—

"ಸತ್ಯಾನೃತೇ ಮಿಥುನೀಕೃತ್ಯ"

(ದಿಟವನ್ನೂ ಸಟೆಯನ್ನೂ ಬೆರಕೆಮಾಡಿ) ಎಂದು ಅವರು ಪದಪ್ರಯೋಗ ಮಾಡಿದ್ದಾರೆ. ಇದರಲ್ಲಿ ಗಮನಕ್ಕೆ ಬರಬೇಕಾದ ಅಂಶ ಇನ್ನೊಂದಿದೆ. "ಋತ" ವೆಂಬುದು ಸತ್ಯವೆಂಬುದರಿಂದ ಕೊಂಚಮಟ್ಟಿಗಾದರೂ ಬೇರೆಯಾದದ್ದಾದರೆ

"ಅನೃತ"ವೆಂಬುದು "ಅಸತ್ಯ"ದಿಂದಲೂ ಅಷ್ಟುಮಟ್ಟಿಗೆ ಬೇರೆಯಾದದ್ದಾಗಿರಬೇಕು. ಮೇಲಣ ವಾಕ್ಯದಲ್ಲಿ ಶಂಕರಾಚಾರ್ಯರು ಸತ್ಯಕ್ಕೆ ವಿರೋಧವಾದದ್ದನ್ನು ಸೂಚಿಸುವಲ್ಲಿ "ಅಸತ್ಯ"ವೆಂದು ಹೇಳದೆ "ಅನೃತ"ವೆಂಬ ಮಾತನ್ನು ಉಪಯೋಗಿಸಿದ್ದಾರೆ. ಇದರಲ್ಲಿ ಒಂದು ಮರ್ಮವಿರಬಹುದು. "ಋತ" ಎಂಬುದು ಸತ್ಯದ ಪ್ರಥಮಾವಸ್ಥೆ. "ಸತ್ಯ" ಎಂಬುದು ಋತದ ದ್ವಿತೀಯಾವಸ್ಥೆ. ಹಾಗಿರುವುದರಿಂದ ಅನೃತವೆಂಬ ಮಾತಿನಲ್ಲಿ ಸತ್ಯಕ್ಕೆ ಅಭಾವವಾಗಿದೆ ಎಂದು ಮಾತ್ರವಲ್ಲದೆ, ಸತ್ಯದ ಮೂಲಕ್ಕೂ ಕೂಡ ಅಭಾವವಾಗಿದೆ ಎಂದು—ಎಂದರೆ ಅದು ಅತ್ಯಂತ "ಅಸತ್ಯ" ಎಂದು—ಧ್ವನಿ ತೋರುತ್ತದೆ.

ಸತ್ಯವು ಋತದ ವ್ಯವಹಾರಾರ್ಹತೆ, ಅನೃತವು ಸತ್ಯದ ಸಂಪೂರ್ಣ ಶೂನ್ಯತೆ.

ಶಂಕರಾಚಾರ್ಯರು ಕಠೋಪನಿಷತ್ತಿನ—

"ಋತಂ ಪಿಬಂತೌ ಸುಕೃತಸ್ಯ ಲೋಕೇ"

ಎಂಬ ವಾಕ್ಯದ ಮೇಲಣ ಭಾಷ್ಯದಲ್ಲಿ—

"ಋತಂ ಸತ್ಯಂ, ಅವಶ್ಯಂ ಭಾವಿತ್ವಾತ್ ಕರ್ಮಫಲಂ, ಪಿಬಂತೌ ||"

ಎಂದು ಭಾಷ್ಯಮಾಡಿದ್ದಾರೆ.

ಸಾಯಣಾಚಾರ್ಯರು—

"ಋತೇನ ಮಿತ್ರಾವರುಣೌ" (ಅ ೧, ಅ ೧, ವ ೪-೮) ಎಂಬ ಋಗ್ವೇದ ಮಂತ್ರದ ಮೇಲಣ ಭಾಷ್ಯದಲ್ಲಿ—

"ಋತೇನ ಅವಶ್ಯಂ ಭಾವಿತಯಾ ಸತ್ಯೇನ ಫಲೇನ|....ಋತಮಿತ್ಯುದಕನಾಮ, ಸತ್ಯಂ ವಾ ಯಜ್ಞಂ ವಾ ಇತಿ ಯಾಸ್ಕಃ"

ಎಂದು ಬರೆದಿದ್ದಾರೆ. ಪುನಃ

"ಋತೇನ ಯಾ ವೃತೌ ಋಧಾವೃತಸ್ಯ" (ಅ ೧, ಅ ೨, ವ ೯-೫)

ಎಂಬಲ್ಲಿ—

"ಋತೇನ ಸತ್ಯವಚನೇನ ಯಜಮಾನಾನುಗ್ರಹಕಾರಣಂ| ಋತಾವೃಧೌ| ಋತಂ ಅವಶ್ಯಂಭಾವಿತಯಾ ಸತ್ಯಂ ಕರ್ಮಫಲಂ| ತಸ್ಯ ವರ್ಧಕೌ ||"

ಎಂದು ಬರೆದಿದ್ದಾರೆ. ಪುನಃ

"ಗೋಪಾಂ ಋತಸ್ಯ ದೀದಿವಿಂ" (ಅ ೧, ಅ ೧, ವ ೨)

ಎಂಬಲ್ಲಿ—

"ಋತಸ್ಯ ಸತ್ಯಸ್ಯ ಅವಶ್ಯಂ ಭಾವಿನಃ ಕರ್ಮಫಲಸ್ಯ | ದೀದಿವಿಂ ಪೌನಃಪುನ್ಯೇನ ಭೃತಂ ವಾ ದ್ಯೋತಕಂ ||"

ಎಂದು ಬರೆದಿದ್ದಾರೆ.

ಹೀಗೆ "ಋತ" ಎಂಬುದರ ಮೂಲಾರ್ಥದಲ್ಲಿ ಸತ್ಯವೆಂಬುದು ಮಾತ್ರವಲ್ಲದೆ ಕರ್ಮಫಲವಿಷಯಕವಾದ ಋಣಬಂಧನವಿಧಿಯೆಂಬುದೂ ಸೇರಿರುತ್ತದೆ. ಸ್ವಾಭಾವಿಕವಾಗಿ ಉಂಟಾದದ್ದು ಮತ್ತು ಹಾಗೆ ಉಂಟಾದದ್ದರಿಂದ ಸ್ವಾಭಾವಿಕವಾಗಿ ಫಲಿಸತಕ್ಕಂಥಾದ್ದು—ಸಹಜವಸ್ತು ಮತ್ತು ತದ್ವಸ್ತುಕಾರ್ಯ, ಸೃಜಚರ್ಯೆ ಮತ್ತು ತಜ್ಜನಿತ ಫಲ—ಈ ಸರಪಣಿಯೇ ಋತ. ಈ ಸರಪಣಿಯನ್ನು ತಪ್ಪಿಸಿಕೊಳ್ಳುವುದು ಸಾಧ್ಯವಲ್ಲದ ಕಾರಣ ಅದು ಒಂದು ನಿಯಮ. ಹಾಗೆ ಅದು ಒಂದು ವ್ರತ. ಆದದ್ದರಿಂದ ಅದು ಒಂದು ಧರ್ಮ. ಹೀಗೆ ಪರಸ್ಪರ ಪರಿಣಾಮಪರಂಪರೆಯಲ್ಲಿ ಋತವೆಂಬುದೇ ಧರ್ಮ.

೭

ಈ ಪ್ರಕರಣದಲ್ಲಿ ವಿಚಾರಕ್ಕೆ ಬರಬೇಕಾದ ಶಬ್ದಗಳು ಇನ್ನು ಮೂರಿವೆ:

(೧) ಋತು (೨) ಋಜು (೩) ಋಣ

ಇವುಗಳ ನಿರ್ವಚನ ಹೀಗಿರುತ್ತದೆ:

(೧) "ಋತು" ಶಬ್ದವೂ "ಋ" ಧಾತುವಿನಿಂದ ಬಂದದ್ದು. ಇಲ್ಲಿ "ಋ" ಎಂದರೆ "ನಡೆಯುವುದು" "ನಡೆಯಿಸುವುದು" ಎಂದರ್ಥ (ಋ—ಗತಿಪ್ರಾಪಣಯೋಃ || ಭ್ವಾದಿಗಣ). ಕಾಲಕಾಲಕ್ಕೆ ಸರಿಯಾಗಿ ನಡೆಯುವಂಥಾದ್ದು ಋತು. ಅದು ಕಾಲಕ್ಲೃಪ್ತಿ ಅಥವಾ ನಿಯತಕಾಲೀನತೆ.

(೨) "ಋಜು" ಶಬ್ದವು "ಋಜ" ಧಾತುವಿನಿಂದ ಬಂದದ್ದು. "ಋಜು" ಎಂದರೆ ನಡೆಯುವುದು, ಇರುವುದು, ಸಂಪಾದಿಸುವುದು, ಅನುಭವಿಸುವುದು (ಋಜ—ಗತಿ ಸ್ಥಾನಾರ್ಜನೋಪಾರ್ಜನೇಷು|| ಭ್ವಾದಿ) ಇದು ಸಹಜಗುಣಾನುಸಾರವಾದ ವರ್ತನೆ. ಅದೇ ಋಜುತೆ ಅಥವಾ ಆರ್ಜವ. ನಡೆನುಡಿಗಳಲ್ಲಿ ಕೊಂಕುಕೃತ್ರಿಮಗಳಿಲ್ಲದಿರುವುದು.

(೩) "ಋಣ" ಶಬ್ದವು "ಋತ" ಶಬ್ದದಂತೆ "ಋ" ಧಾತುವಿನಿಂದ ಬಂದದ್ದು (ಋ—ಗತಿಪ್ರಾಪಣಯೋಃ); ಹಾಗೆಂದರೆ ಸಾಲ, ಕಡ (ಕಾಲಾಂತರದೇಯ ವಿನಿಮಯೋಪಲಕ್ಷಣಾರ್ಥಮ್—ಧಾತುವೃತ್ತಿ). ಇಬ್ಬರು ಮನುಷ್ಯರ ಪರಸ್ಪರ ವರ್ತನೆಯಿಂದ ಸಹಜವಾಗಿ ಆಗುವ ಫಲಾಫಲಸಂಬಂಧವೇ ಋಣ.

ಜೀವಕ್ಕೂ ಲೋಕಕ್ಕೂ ಆಗುವ ಸಂಪರ್ಕದಲ್ಲಿ ಸ್ವಾಭಾವಿಕವಾಗಿ ಉದಿಸುವ ಅನ್ಯೋನ್ಯ ಪರಿಣಾಮಪರಂಪರೆಯೇ "ಋಣ".

ಋತವೆಂಬುದು ಋಜು ಎಂಬುದಕ್ಕೆ ಸಮಾನಾರ್ಥಕ ಪದ. ಮನಸ್ಸಿನೊಳಗಡೆ ಕೃತ್ರಿಮವಿಲ್ಲದೆ ಇರುವಾಗ, ಮತ್ತು ಹೊರಗಡೆಯಿಂದ ಅದರ ಮೇಲೆ ಯಾವ ಪ್ರಭಾವವೂ ಬೀಳದಿರುವಾಗ ಒಂದಾನೊಂದು ವಿಷಯವನ್ನು ಕುರಿತು ಆ ಮನಸ್ಸಿನಲ್ಲಿ ಯಾವ ಭಾವನೆ ಹುಟ್ಟುತ್ತದೆಯೋ ಅದು ಋತ. ಅಂಥ ಋತಕ್ಕನುಗುಣವಾದ ನಡವಳಿಕೆಯೇ ಋಜುವರ್ತನೆ ಅಥವಾ ಆರ್ಜವ—ಋಜುಮಾರ್ಗ (Upright, Straightforward). ಹೀಗೆ ಅದು ಸ್ವಾಭಾವಿಕವಾಗಿ ಉಂಟಾದದ್ದು; ಕೃತಕ ವಕ್ರಗಳಿಲ್ಲದ್ದು; ಆದಕಾರಣ ಅದು ಸೈಜ ಅಥವಾ ನಿಜ.

ಸಂಸ್ಕೃತದಲ್ಲಿ 'ನಿಜ' ಎಂಬ ಮಾತಿಗೆ 'ಸತ್ಯ' ಎಂಬುದರ ಪರ್ಯಾಯಪದವಾಗಿ ರೂಢಿಯಿಲ್ಲ. ಆದರೆ ಕನ್ನಡದಲ್ಲಿ ಅಂಥ ರೂಡಿ ಸಾಮಾನ್ಯವಾಗಿದೆ. 'ನಿಜ' ಎಂದರೆ 'ದಿಟ' ಎಂದು ಬಳಕೆಯ ಅರ್ಥ. ನಿಜ ಎಂಬುದಕ್ಕೆ 'ಸ್ವಾಭಾವಿಕ', 'ಸಹಜ' ಎಂದು ಸಂಸ್ಕೃತದಲ್ಲಿ ಅರ್ಥವೆಂಬುದನ್ನು ನಾವು ಜ್ಞಾಪಕಕ್ಕೆ ತಂದುಕೊಂಡು, 'ಋತ' ಎಂಬುದರ ಭಾವವೂ ಹಾಗೆಯೇ 'ಸ್ವಾಭಾವಿಕ' 'ಪ್ರಕೃತಿಸಿದ್ಧ' ಎಂಬುದನ್ನು ನೋಡಿದರೆ, ಆಗ ನಿಜ, ಋತ ಎಂಬೆರಡು ಮಾತುಗಳೂ ಕನ್ನಡಪ್ರಯೋಗದಲ್ಲಿರುವಂತೆ ಒಂದಕ್ಕೊಂದು ಪರ್ಯಾಯಪದವಾಗಿರುವುದು ಯುಕ್ತವೆಂದು ತೋರುತ್ತದೆ.

೮

ಮನಸ್ಸಿನಲ್ಲಿ ಋತವಾಗಿದ್ದದ್ದು ಬಾಯಿಂದ ಸತ್ಯವಾಗಿ ಹೊರಡುವಾಗ ಏನಾದರೂ ವ್ಯತ್ಯಾಸ ಹೊಂದುತ್ತದೆಯೆ? ಹಾಗೆ ವ್ಯತ್ಯಾಸವಿಲ್ಲದೆ ಒಂದೇ ಆಗಿರುವ ಪಕ್ಷದಲ್ಲಿ ಎರಡು ಬೇರೆಬೇರೆ ಮಾತುಗಳು ಅನಾವಶ್ಯಕವಾಗುತ್ತವಲ್ಲವೆ?

ವೇದವು ಎರಡು ಪದಗಳನ್ನೂ ಅಂಗೀಕರಿಸಿಕೊಂಡಿರುವ ಕಾರಣದಿಂದ ಅವುಗಳಿಗಿರುವ ಅರ್ಥಭೇದಕ್ಕೂ ಅದು ಅನುಮತಿಕೊಟ್ಟಂತಾಯಿತು. ಆ ಭೇದ ಸರಿಯೆ? ಮಾತು ಮನಸ್ಸಿನಿಂದ ಬೇರೆಯಾಗಬಹುದೆ? ಅಂತರಂಗದಲ್ಲಿರುವುದನ್ನು ಬಾಯಿ ಬದಲಾಯಿಸಬಹುದೆ?

ನಮ್ಮ ಮನಸ್ಸಿನೊಳಗಣ ತಿಳಿವಳಿಕೆಗೂ ನಾವಾಡುವ ಮಾತಿಗೂ ಸಾಮಾನ್ಯವಾಗಿ ವ್ಯತ್ಯಾಸವಿರತಕ್ಕದ್ದಲ್ಲ. ಹೊರಮಾತು ಒಳತಿಳಿವಿನ ಯಥಾ

ವತ್ತಾದ ಪ್ರತಿಬಿಂಬವಾಗಿಯೇ ಇರಬೇಕು. ಅದೇ ಯಥಾರ್ಥ, ಆದದ್ದ ರಿಂದಲೇ ಧರ್ಮ. ಆದರೆ ಅದು ಸಾಧ್ಯವಾಗದೆ ಇರುವ ಸಂದರ್ಭಗಳೂ ಮನುಷ್ಯಜೀವನದಲ್ಲಿ ಒಮ್ಮೊಮ್ಮೆ ಬರುವುದುಂಟು. ನಮ್ಮ ಹತ್ತು ಸಂದರ್ಭ ಗಳ ಪೈಕಿ ಎಂಟೊಂಭತ್ತರಲ್ಲಿ ಮನಸ್ಸಿನ ಯಥಾರ್ಥವನ್ನು ಮಾತಿನ ಹೆಚ್ಚು ಕಡಮೆಗಳೇನೂ ಇಲ್ಲದಂತೆ ವರದಿಮಾಡಲಾದೀತು. ಆದರೆ ಉಳಿದ ಒಂದೆರಡು ಸಂದರ್ಭಗಳಲ್ಲಿ ಕೆಲವು ಅಡಚಣೆಗಳೇಳುತ್ತವೆ. ಆಗ ನಾವು ಮನೋ ಗತವನ್ನು ವಾಕ್ಕಿನಿಂದ ರೂಪಗೊಳಿಸುವುದಕ್ಕೆ ಮುಂಚೆ ಅದನ್ನು ಪರೀಕ್ಷಿಸಿ ಪರಿಷ್ಕರಿಸುವುದು ಲೋಕಹಿತದೃಷ್ಟಿಯಿಂದ ಕರ್ತವ್ಯವಾಗಬಹುದು. ಇದಕ್ಕೆ ಕಾರಣಗಳು ಮುಖ್ಯವಾಗಿ ಮೂರು ನಾಲ್ಕು :—

(೧) ಇತರ ಪ್ರಮಾಣಗಳ ಪರಾಮರ್ಶದ ಆವಶ್ಯಕತೆ.

(೨) ಭಾಷಾಸಾಮರ್ಥ್ಯದ ನ್ಯೂನಾತಿರೇಕಗಳು.

(೩) ಲೋಕಪರಿಣಾಮಚಿಂತನೆಯ ಕರ್ತವ್ಯತೆ.

(೪) ಬಹಿಷ್ಪ್ರಮಾಣದ ಆವಶ್ಯಕತೆ

ಆಡಿದ ಮಾತು ಲೋಕವ್ಯವಹಾರಕ್ಕೆ ಹಿತಕರವಾಗಿರಬೇಕು. ಇದು ಮೂಲಸೂತ್ರ. ಹಾಗಿರಬೇಕಾದರೆ ಮಾತನ್ನಾಡುವವನಲ್ಲಿ ಒಂದು ಜಾಗರೂ ಕತೆ—ಒಂದು ಶೋಧನ ಬುದ್ಧಿ—ಒಂದು ಸ್ನೇಹಪ್ರವೃತ್ತಿ (Sympathy), ಸಹಾನುಭೂತಿ ಇರಬೇಕು.

(೧) ಯಾವ ಮನುಷ್ಯನೂ ತನ್ನ ಮನಸ್ಸಿನೊಳಗೆ ಮೊದಲು ಹೊಳೆದದ್ದೇ ಯಥಾರ್ಥವೆಂದು—ಯಥಾರ್ಥದ ಪರಿಪೂರ್ಣವೆಂದು—ಭಾವಿಸಲಾಗದು. ಏಕೆಂದರೆ ಅವನ ಅಂತಃಕರಣದಲ್ಲಿ ಎರಡು ಬಗೆಯ ದೋಷಗಳಿರುವುದು ಅಸಂಭವವಲ್ಲ. (i) ಅವನ ಕಣ್ಣು ಕಿವಿ ಮೊದಲಾದ ಜ್ಞಾನೇಂದ್ರಿಯಗಳು ಮಂದವಾಗಿರಬಹುದು, ರೋಗಗ್ರಸ್ತವಾಗಿರಬಹುದು. ಕಾಮಾಲೆ ಮೊದಲಾದ ವ್ಯಾಧಿಯಿರುವವನಿಗೆ ಹಾಲು ಅರಿಸಿನದ ನೀರಾಗಿ ಕಾಣಬಹುದು. ಇಂಥ ಪ್ರಮಾದ ಭ್ರಾಂತಿಗಳು ಮನುಷ್ಯಬುದ್ಧಿಗೆ ಸಹಜವಾದವು. ಆ ದೋಷವನ್ನು ಕಳೆಯಲು ಅವನು ತನ್ನ ಅನುಭವವನ್ನು ಇತರರ ಅನುಭವಗಳೊಡನೆ ಹೋಲಿಸಿ ವಿಮರ್ಶಿಸಿಕೊಳ್ಳುವುದು ಆವಶ್ಯಕ. (ii) ಪ್ರತಿಯೊಬ್ಬನಲ್ಲಿಯೂ ಕೆಲವು ಪೂರ್ವವಾಸನೆಗಳೂ, ಪೂರ್ವಾಭಿಮಾನಗಳೂ ಅಂತರಂಗದ ತಳದಲ್ಲಿ ಅಡಗಿಕೊಂಡಿರುತ್ತವೆ. ಇವೇ ಆಶೆ ಪ್ರೀತಿಗಳು. ಇವು ಒಳಗಿದ್ದುಕೊಂಡೇ ನಮ್ಮ ಕಣ್ಣಿಗೆ ಬಣ್ಣದ ಪೊರೆಯನ್ನು ತೊಡಿಸುತ್ತವೆ; ನಮ್ಮ ಬುದ್ಧಿಯ

ಕಾಲನ್ನು ಒಂದು ಪಕ್ಕಕ್ಕೆ ಸೊಟ್ಟಾಗಿಸುತ್ತವೆ. ಆದರಿಂದ ನಮ್ಮ ಮನಸ್ಸಿನ ಸಂಚಾರವು ನಮಗೆ ತಿಳಿಯದಂತೆಯೇ ವಕ್ರವಾಗಬಹುದು. ಮಾನಸಿಕ ಪ್ರಮಾದವೂ (Prejudice) ಅಪರೂಪವಲ್ಲ. ಇಂಥ ಅಪಾಯದ ನಿವಾರಣೆಗೂ ಅನ್ಯರು ಹೇಳುವ ಸತ್ಯವೇನೆಂಬುದನ್ನು ತಿಳಿದು ತನ್ನ ಅನುಭವದೊಡನೆ ತುಲನಮಾಡಿ ಪರಿಶೀಲಿಸುವುದು ಆವಶ್ಯಕ. ಹೀಗೆ ಉಭಯ ದೃಷ್ಟಿಗಳಿಂದಲೂ ಸ್ವಾನುಭವವನ್ನು ಪರಾನುಭವದೊಡನೆ ಉಪಮಾನಿಸಿ ಶೋಧನೆಮಾಡಿಕೊಳ್ಳ ಬೇಕಾಗುತ್ತದೆ. ಈ ಶೋಧನೆಯಿಂದ ತನ್ನ ಮೊದಲ ತಿಳಿವಳಿಕೆಯನ್ನು ಅಷ್ಟೋ ಇಷ್ಟೋ ತಿದ್ದಿಕೊಳ್ಳಬೇಕಾದೀತು.

(೨) ಭಾಷೆಯ ಶಕ್ತಿಯೂ ಸ್ವಾಭಾವಿಕವಾಗಿ ಮಿತವಾದದ್ದು ; ಅಮಿತ ವಾದದ್ದಲ್ಲ. ನಮ್ಮ ಮನಸ್ಸಿನಲ್ಲಿ ಹುಟ್ಟಿದ ಭಾವನೆಗಳನ್ನೆಲ್ಲ ಅವು ಹುಟ್ಟಿ ದಂತೆಯೇ, ಚ ತು ತಪ್ಪದಂತೆ, ಮತ್ತೊಬ್ಬರಿಗೆ ಅನುಭವ ಮಾಡಿಸಿಕೊಡಲು ತಕ್ಕ ಪದಸಾಮಗ್ರಿ ಎಷ್ಟೋ ಸಂದರ್ಭಗಳಲ್ಲಿ ನಮಗೆ ಒದಗಿಬರುವುದಿಲ್ಲ. ಮನಸ್ಸಿನ ಕೆಲಸದ ನಯನವುರುಗಳನ್ನು ನೋಡಿದರೆ ವಾಕ್ಕು ಅದಕ್ಕೆ ಒರಟು ಯಾನವೆಂದು ತೋರುತ್ತದೆ. ಆದರೆ ಲೋಕರೂಢಿಯ ವಾಕ್ಕನ್ನು ಬಿಟ್ಟರೆ ನಮ್ಮ ಅಂತರಂಗದ ಅಭಿವ್ಯಕ್ತಿಗೆ ಬೇರೆ ಸಾಧನವಿಲ್ಲ. ನಮ್ಮ ಮನಸ್ಸಿನ ಆಲಸ್ಯದ ಕಾರಣದಿಂದಲೋ, ನಮ್ಮ ವಿಸ್ಮೃತಿಯ ಕಾರಣದಿಂದಲೋ, ನಮಗೆ ಭಾಷಾಪಾಂಡಿತ್ಯವಿಲ್ಲದ ಕಾರಣದಿಂದಲೋ, ವಚನ ಚಾತುರ್ಯ ಸಾಲದ ಕಾರಣದಿಂದಲೋ ನಾವಾಡಿದ ಮಾತು ಅದನ್ನು ಕೇಳುವವರ ಕಿವಿಗೆ ನಮ್ಮ ಮನಸ್ಸಿನಲ್ಲಿರುವುದಕ್ಕಿಂತ ಹೆಚ್ಚರ್ಥವನ್ನು ಕೊಡಬಹುದು. ಅಥವಾ ಕಡಮೆ ಅರ್ಥವನ್ನು ಕೊಡಬಹುದು. ಸಂಭಾಷಣೆಯ ಅವಸರದಲ್ಲಿ ಇಂಥಾ ನ್ಯೂನಾಧಿಕ್ಯಗಳು ಸಹಜವಾಗಿ ಬರುತ್ತವೆ. ಈ ಕಾರಣದಿಂದ ಋತವು ಸತ್ಯ ವಾಗುವ ಕ್ರಮದಲ್ಲಿ ಯಥಾವತ್ತಾಗಿ ಪ್ರತಿಬಿಂಬಿತವಾಗಿದೆಯೆಂದು ಹೇಳ ಲಾಗದೆ ಹೋಗಬಹುದು. ವಾಗ್ರೂಪಸತ್ಯದಲ್ಲಿ ಮನೋಗತಋತದ ಸ್ಥೂಲಾಂಶಗಳು ಮಾತ್ರ ರೂಪುಗೊಂಡು ಸೂಕ್ಷ್ಮಾಂಶಗಳು ಅಷ್ಟು ಸ್ಫುಟವಾಗದೆ ಹೋಗಬಹುದು.

(೩) ನಮ್ಮ ಮಾತು ಲೋಕಕ್ಕೆ ಉಪಕಾರಕವಾಗಬೇಕೇ ಹೊರತು ಅಪ ಕಾರಕವಾಗಬಾರದು. ಋತವನ್ನು ಹೇಳುತ್ತೇನೆಂದು ಲೋಕಕ್ಕೊಂದು ಕಷ್ಟ ವನ್ನೊದಗಿಸುವುದು ಧರ್ಮವೆನಿಸದು. ಒಂದು ಕುಟುಂಬದಲ್ಲಿ ಒಂದು ಅಪಕಾರ್ಯ ನಡೆಯಿತೆಂದಿಟ್ಟುಕೊಳ್ಳೋಣ. ಆ ಸಂಗತಿ ನಮಗೆ ತಿಳಿದ ಕೂಡಲೇ ನಾವು ಅದನ್ನು ಊರಲ್ಲೆಲ್ಲ ಸಾರಿ ಸತ್ಯಪ್ರಚಾರ ಮಾಡಿದೆವೆಂದು ತೃಪ್ತಿಪಡಬಹುದೆ?

ಆ ಪ್ರಚಾರದಿಂದ ಆ ಕುಟುಂಬಕ್ಕೆ ಒಳ್ಳೆಯದಾಯಿತೆ? ನಮ್ಮ ಬಂಧುಮಿತ್ರವರ್ಗದಲ್ಲಿ ಒಬ್ಬ ಗಂಡಸಿಗೆ ಆತನ ಹೆಂಡತಿಯ ವಿಚಾರವನ್ನೋ, ಅಥವಾ ಆಕೆಗೆ ಆತನ ವಿಚಾರವನ್ನೋ, ತಿಳಿಸಬೇಕಾದ ಆವಶ್ಯಕತೆ ಬರಬಹುದು; ಮತ್ತು ಆ ವಿಚಾರವು ಸಮಾಧಾನಸದ್ದಲ್ಲದೆ ಕಹಿಯಾದದ್ದಾಗಿರಬಹುದು. ಅಂಥಾ ಪ್ರಸಂಗದಲ್ಲಿ ನಿಜವಾದ ಸ್ನೇಹಿತನು ಏನು ಮಾಡುತ್ತಾನೆ? ಧಿಡೀರೆಂದು ತನ್ನ ಮನಸ್ಸಿನಲ್ಲಿರುವುದನ್ನೆಲ್ಲ ಒದರಿಬಿಡುತ್ತಾನೆಯೆ? ಇಲ್ಲ. ಒಂದು ನಯದಿಂದ—ಒಂದು ನಾಜೂಕಿನಿಂದ—ಒಂದು ಮರ್ಯಾದೆಯಿಂದ, ಹೇಳಬೇಕಾದದ್ದನ್ನು ಸೂಚಿಸುತ್ತಾನೆ. ಅವನ ಮಾತನ್ನು ಕೇಳುವವರ ಮನಸ್ಸಿನಲ್ಲಿ ತಳಮಳವೂ, ಕ್ರೋಧವೂ ಕೆರಳುವುದನ್ನು ಎಷ್ಟುಮಟ್ಟಿಗೆ ತಪ್ಪಿಸುವುದು ಸಾಧ್ಯವೋ ಅಷ್ಟುಮಟ್ಟಿಗೆ ತಪ್ಪಿಸಲು ಅವನು ಪ್ರಯತ್ನಿಸುತ್ತಾನೆ. ಒಂದು ಮಹಾದುಃಖದ ವಾರ್ತೆಯನ್ನು ಒಬ್ಬ ಸ್ನೇಹಿತನಿಗೆ ತಿಳಿಸಬೇಕಾದ ಸಂದರ್ಭ ಬಂತೆಂದು ಇಟ್ಟುಕೊಳ್ಳೋಣ. ಆಗ ಋತವೆಂಬ ಕಾರಣದಿಂದ ಆ ವಾರ್ತೆಯನ್ನು ಥಟಕ್ಕನೆ ನುಡಿದುಬಿಡಬಹುದೆ? ಜಾಣನಾದವನು ತಾಳ್ಮೆಯಿಂದ ಆ ವಾರ್ತೆಗೆ ಪೀಠಿಕೆಕಟ್ಟಿ, ಕೊಂಚಕೊಂಚವಾಗಿ ಅದನ್ನು ಹೊರಪಡಿಸುತ್ತ, ಕಡೆಗೆ ಆ ಸ್ನೇಹಿತನೇ ಯಥಾರ್ಥವನ್ನು ತಾನಾಗಿ ಗ್ರಹಿಸಿಕೊಳ್ಳುವ ಹಾಗೆ ಮಾತನಾಡುತ್ತಾನೆ. ದುಃಖದ ವೇಗವನ್ನು ಆದಷ್ಟುಮಟ್ಟಿಗೂ ಕಡಮೆಮಾಡಿ, ಸಹನೆ ಸ್ಥೈರಣೆಗಳನ್ನು ಹೆಚ್ಚುಮಾಡಿಸುವುದು ಸ್ನೇಹಿತನ ಉದ್ದೇಶವಾಗಿರುತ್ತದೆ.* ಹೀಗೆ ಮನಸ್ಸಿಗೆ ತೋರಿದ ಸಂಗತಿಯನ್ನು ಬಾಯಲ್ಲಿ ನುಡಿಯುವಾಗ ಒಂದು ಸಂದರ್ಭೌಚಿತ್ಯವನ್ನು ನೋಡಬೇಕಾಗುತ್ತದೆ. ಮಾತನಾಡುವವನು ತನ್ನೊಳಗಿನದಕ್ಕೂ ಹೊರಗಿನದಕ್ಕೂ ಒಂದು ಹೊಂದಿಕೆಯನ್ನುಂಟುಮಾಡಬೇಕು. ಒಳಗಿನದನ್ನು ಬಿಡಬಾರದು, ಹೊರಗಿನದನ್ನು ಕೆರಳಿಸಬಾರದು, ಒಳಗಿನ ತಿಳಿವಳಿಕೆಯಿಂದ ತಪ್ಪಬಾರದು, ಹೊರಗೆ ಕೇಳುವವರ ಮನಸ್ಸನ್ನೂ ಕೆಡಿಸಬಾರದು. ಋತಕ್ಕೂ ಲೋಕಹಿತಕ್ಕೂ ಇರಬಹುದಾದ ಪರಸ್ಪರ ವಿರೋಧವನ್ನು ಕಳೆದು ಅನುಕೂಲತೆಯನ್ನು ಕಲ್ಪಿಸಬೇಕು. ಇಂಥಾ ಅಂತರಂಗ ಬಹಿರಂಗ ಸಮನ್ವಯದಿಂದ ರೂಪುಗೊಂಡ ಋತವೇ ಸತ್ಯ.

---

* ಭಾಸಮಹಾಕವಿಯ 'ಪ್ರತಿಮಾ' ನಾಟಕದಲ್ಲಿ ಇದಕ್ಕೆ ನಿದರ್ಶನ ದೊರೆಯುತ್ತದೆ. ಈ ಲೇಖಕನ 'ಸಂಸ್ಕೃತಿ' (ಕಾವ್ಯಾಲಯ, ೧೯೬೯) ಎಂಬ ಪುಸ್ತಕದಲ್ಲಿ 'ಸತ್ಯನಿರೂಪಣೆಯಲ್ಲಿ ನಯವಿಶೇಷ' 'ಸತ್ಯ ಮತ್ತು ಧರ್ಮ' ಎಂಬ ಪ್ರಕರಣಗಳನ್ನು ನೋಡಿರಿ (ಪುಟಗಳು ೩೬ ಮತ್ತು ೪೨.)

ಸಂಪೂರ್ಣದರ್ಶನವಾಗಬೇಕಾದರೆ ಇತರರ ಅಭಿಮತ ಅಭಿಪ್ರಾಯಗಳನ್ನೂ ನಾವು ಗ್ರಹಿಸಿ ಸಮಾಲೋಚಿಸಬೇಕು. ಅನ್ಯರ ವಾಕ್ಯವೂ ಒಂದು ಪ್ರಮಾಣವೆಂಬುದಕ್ಕೆ ಸಂದೇಹವಿಲ್ಲ. ಅದು ನಮ್ಮ ಅಭಿಪ್ರಾಯಕ್ಕೆ ಅನುಕೂಲವಲ್ಲದಿದ್ದರೂ ಸಮಾಲೋಚನೆಯಾಗಬೇಕಾದದ್ದೇ. ಅದಕ್ಕೂ ಒಂದಷ್ಟು ಪ್ರಮಾಣತೆ ಇದ್ದೇ ಇರುತ್ತದೆ.

ಕೆಲವು ಜನರಲ್ಲಿ "ಅಹಂಕಾರ" ಎಷ್ಟು ಮಟ್ಟಿಗೆ ಪ್ರಬಲಿಸಿರುತ್ತದೆಂದರೆ ಅವರಲ್ಲಿ "ಮತ್ತೊಬ್ಬರಲ್ಲಿ ಕೊಂಚವಾದರೂ ಬುದ್ಧಿಯಿದ್ದೀತು, ತಿಳಿವಳಿಕೆಯಿದ್ದೀತು, ಹಿತಚಿಂತನೆಯಿದ್ದೀತು; ಮರ್ಯಾದೆಗೋಸ್ಕರವಾಗಿಯಾದರೂ ಅವರನ್ನು ಒಂದು ಮಾತು ಕೇಳೋಣ"—ಎಂಬಷ್ಟು ತಾಳಿಕೆಯೂ ತೋರುವುದಿಲ್ಲ. ಈ ಬಗೆಯ ಅನ್ಯಜನೋಪೇಕ್ಷೆಯೂ ಸತ್ಯಗ್ರಹಣಕ್ಕೆ ಅಡ್ಡಿಯಾಗಬಹುದು. ಇದೂ ಒಂದು ಅಪಾಯ.

೯

ಋತಸತ್ಯಗಳ ಅರ್ಥವ್ಯತ್ಯಾಸ ಈ ಶ್ರುತಿವಾಕ್ಯದಿಂದ ಸ್ಪಷ್ಟಪಡುತ್ತದೆ:—

> ಋತಂ ತ್ವಾ ಸತ್ಯೇನ ಪರಿಷಿಂಚಾಮೀತಿ ಸಾಯಂ ಪರಿಷಿಂಚತಿ | ಸತ್ಯಂ ತ್ವರ್ತೇನ ಪರಿಷಿಂಚಾಮೀತಿ ಪ್ರಾತಃ | ಅಗ್ನಿರ್ವಾ ಋತಮ್ | ಅಸಾವಾದಿತ್ಯಃ ಸತ್ಯಮ್ | ಅಗ್ನಿಮೇವ ತದಾದಿತ್ಯೇನ ಸಾಯಂ ಪರಿಷಿಂಚತಿ | ಅಗ್ನಿನಾದಿತ್ಯಂ ಪ್ರಾತಸ್ಸಃ || (ತೈತ್ತಿರೀಯ ಬ್ರಾಹ್ಮಣ, ೨-೧-೧೧)

ಇಲ್ಲಿ ಹಗಲಿರುಳುಗಳೆರಡೂ ಒಂದೇ ಕಾಲತತ್ತ್ವದ ಎರಡು ಮುಖಗಳು. ಅವುಗಳನ್ನು ಏಕಾಕಾರವಾಗಿ ಗ್ರಹಿಸಿ ಸೇವಿಸಬೇಕಾದದ್ದು ಎಂದು ತಾತ್ಪರ್ಯ. ಅದರಲ್ಲಿ ಸಾಯಂಕಾಲದ ಹೋಮದಲ್ಲಿ ಧ್ಯೇಯವಾದ ಅಗ್ನಿದೇವತೆ ಋತ; ಪ್ರಾತಃಕಾಲ ಧ್ಯೇಯವಾದ ಸೂರ್ಯದೇವತೆ ಸತ್ಯ. ಅಗ್ನಿಸೂರ್ಯರಿಬ್ಬರೂ ತೇಜೋವಂತರಾದ ದೇವತೆಗಳೇ. ಆದರೆ ಅಗ್ನಿಯು ಕಾಷ್ಠಾದಿ ದ್ರವ್ಯಗಳಲ್ಲಿ ಅಡಗಿಕೊಂಡಿದ್ದು, ತಾನಿದ್ದರೂ ಹೊರಕ್ಕೆ ಕಾಣಿಸದಿರುವುದುಂಟು. ಸೂರ್ಯನು ಹಾಗೆ ಗೂಢವಾಗಿರುವವನಲ್ಲ. ಋತವು ಒಂದೊಂದು ವೇಳೆ ಅಗ್ನಿಯಂತೆ ಗೂಢವಾಗಿರತಕ್ಕದ್ದು; ಅದು ಮೊದಲು ಮನೋಗತವಾದ—ಹೃದಯಸ್ಥವಾದ—ಯಥಾರ್ಥಗ್ರಹಣ. ಸತ್ಯವಾದರೋ ಸೂರ್ಯನಂತೆ ಪ್ರಕಾಶಮಾನವಾದದ್ದು; ಅದು ಮುಖಸ್ಥವಾದ, ವ್ಯವಹಾರಗತವಾದ

ಯಥಾರ್ಥಪ್ರತಿಪಾದನ. ಮೂಲರೂಪದಲ್ಲಿ ಎರಡೂ ಒಂದೇ. ಅಭಿವ್ಯಂಜನೆಯಲ್ಲಿ ಕೊಂಚ ಬೇರೆಬೇರೆ.

೧೦

ಪ್ರಪಂಚದಲ್ಲಿ ಪ್ರತಿಯೊಂದು ವಸ್ತುವಿಗೂ ಎರಡು ಪಕ್ಕಗಳಿರುತ್ತವೆ. ಎಷ್ಟೋ ವಸ್ತುಗಳು ಮೂರು ಪಕ್ಕವುಳ್ಳವೂ ನಾಲ್ಕೈದಾದ ಪಕ್ಕಗಳುಳ್ಳವುಗಳೂ ಉಂಟು. ಆದರೆ ಎರಡಂತೂ ಎಲ್ಲಕ್ಕೂ ಇರುತ್ತವೆ. ಮನುಷ್ಯನ ಮೈಗೆ ಕಣ್ಣು ಪಕ್ಕ, ಬೆನ್ನು ಪಕ್ಕಗಳಿರುತ್ತವೆ; ಮರದ ಎಲೆಗೆ ಹಿಂಗಡೆ ಮುಂಗಡೆಗಳಿರುತ್ತವೆ; ಬಟ್ಟೆಗೆ ಸೀದಾ ಉಲ್ಟಾ,—ಹೀಗೆ. ಅವೆರಡೂ ಬೇರೆ ಬೇರೆಯಲ್ಲ. ಬೆನ್ನುಕಡೆಯನ್ನು ಕಣ್ಣು ಕಡೆಯಿಂದ ಬೇರ್ಪಡಿಸಲಾಗುವುದಿಲ್ಲ. ಎರಡು ಪಕ್ಕಗಳೂ ಒಂದಕ್ಕೊಂದು ಅಂಟಿಕೊಂಡಿರುತ್ತವೆ. ಅದು ಒಂದೇ ಪದಾರ್ಥ. ಎರಡೂ ಅದರ ಪಕ್ಕಗಳೇ.

ಹಾಗೆಯೇ ಋತ, ಸತ್ಯ ಇವು ಒಂದೇ ವಸ್ತು.

(೧) ಸತ್ಯಂ (೨) ತಥ್ಯಂ (೩) ಋತಂ (೪) ಸಮ್ಯಕ್ ಅಮೂನಿ ತ್ರಿಷು ತದ್ವತಿ.

—ಅಮರಕೋಶ (ಪ್ರಥಮಕಾಂಡ, ವಾಗ್ವರ್ಗ)

ಋತವೆಂಬುದೂ ಸತ್ಯವೆಂಬುದೂ ಹಾಗೆಯೇ ಯಥಾರ್ಥವೆಂಬ ಒಂದೇ ವಸ್ತುವಿನ ಎರಡು ಪಕ್ಕಗಳ ಹೆಸರುಗಳು.

ವೇದವು ಹೇಳುವ ಉಪಮಾನವು ಪೂರ್ಣವಾಗಿ ಸರಿಯೆನ್ನಿಸುತ್ತದೆ.

ಅಗ್ನಿರ್ವಾ ಋತಂ
ಅಸಾವಾದಿತ್ಯಸ್ಸತ್ಯಂ

ಲೋಕದ ಜೀವಿಕೆಗೆ ಮೂಲಕಾರಣವಾದದ್ದು ಉಷ್ಣ ಅಥವಾ ಶಾಖ. ಶಾಖವಿಲ್ಲದೆ ಯಾವುದೂ ಬಾಳಲಾರದು.

ಯೋಽಸೌ ತಪಸ್ನುದೇತಿ
ಸ ಸರ್ವೇಷಾಮ್ ಭೂತಾನಾಮ್
ಪ್ರಾಣಾನಾದಾಯೋದೇತಿ
ಅಸೌ ಯೋಽಸ್ತಮೇತಿ, ಸ ಸರ್ವೇಷಾಮ್

ಭೂಲೋಕದಲ್ಲಿ ಮಾತ್ರವೇ ಅಲ್ಲ. ನಕ್ಷತ್ರ ಗ್ರಹ ತಾರೆಗಳೂ ಸಹ ಸೂರ್ಯನಿಂದ ಶಕ್ತಿವಂತವಾಗುತ್ತವೆ.

ಹೀಗೆ ಸರ್ವಲೋಕ ಸಾಮಾನ್ಯನಾದ ಸೂರ್ಯನು ಉಷ್ಣಮೂಲ ಕಾರಣನು.

ಇನ್ನೊಂದು ಕಡೆ ಪ್ರಾಣಿಯ ಹೃದಯಾಂತರದಲ್ಲಿರುವ ಜಠರಾಗ್ನಿ, ಇದೂ ಲೋಕಕ್ಕೆ ಉಷ್ಣಕಾರಕ. ಇದು ಸೂರ್ಯನಂತೆ ಸರ್ವಸಾಮಾನ್ಯವಾದದ್ದು, ಇದು ಪ್ರತಿಯೊಬ್ಬ ಜೀವಿಗೂ ಪ್ರತ್ಯೇಕ. ಒಬ್ಬೊಬ್ಬ ಜಂತುವಿನ ಒಳಗಡೆ ಹುಟ್ಟಿ ಒಳಗಡೆ ಕಾಯುತ್ತದೆ.

ಸೂರ್ಯನು ಸಮಷ್ಟ್ಯುಷ್ಣ ; ಅಗ್ನಿಯು ವ್ಯಷ್ಟ್ಯುಷ್ಣ.

ಎರಡೂ ಒಂದಾಗಿ ಬೆರೆತಾಗ ಲೋಕವ್ಯಾಪಾರ. ಇದು ಮೇಲಣ ವೇದವಾಕ್ಯದ ತಾತ್ಪರ್ಯ.

"ಋತಂ ತ್ವಾ ಸತ್ಯೇನ ಪರಿಷಿಂಚಾಮಿ."

ಎಂದಾಗಲೀ

"ಸತ್ಯಂ ತ್ವರ್ತೇನ ಪರಿಷಿಂಚಾಮಿ"

ಎಂದಾಗಲೀ ಹೇಳಿದರೆ, "ಸತ್ಯದ ಸುತ್ತ ಋತವನ್ನು ಚಿಮುಕಿಸಿ ಎರಡನ್ನೂ ಒಂದಾಗಿಸುತ್ತೇನೆ." ಅಥವಾ "ಋತಕ್ಕೆ ಸತ್ಯವನ್ನು ಸುತ್ತುಗಟ್ಟಿ ಎರಡನ್ನೂ ಒಂದುಗೂಡಿಸುತ್ತೇನೆ" ಎಂದು ಭಾವ.

ಎಂದರೇನಾಯಿತು? ನನ್ನ ಅಂತರಂಗದ ಅಂತರಂಗದಲ್ಲಿ ಯಾವುದು ಹೇಗೆ ಎಂದು ತೋರುತ್ತದೆಯೋ ಅದನ್ನು ಬಹಿರಂಗ ಪ್ರಮಾಣಗಳಿಂದ ತೋರಿ ಬಂದದ್ದರ ಜೊತೆಗೆ ಸೇರಿಸಿಕೊಂಡು ವಿಮರ್ಶೆ ಮಾಡಿ, ಹಾಗೆ ಶುದ್ಧವಾದ ಸಿದ್ಧಾಂತವನ್ನು ಅನುಸರಿಸುತ್ತೇನೆ. ಹಾಗೆ ಉಭಯ ಪ್ರಮಾಣಗಳಿಂದ ಶುದ್ಧವಾದದ್ದರ ಆಚರಣೆಯೇ ಧರ್ಮ.

## ೧೧

ತೈತ್ತಿರೀಯೋಪನಿಷತ್ತಿನ ಪ್ರಾರಂಭದಲ್ಲಿ—

ಋತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ ॥

—ಎಂದು ಬರುತ್ತದೆ. ಪುನಃ :—

ತಸ್ಯ ಶ್ರದ್ಧೈವ ಶಿರಃ । ಋತಂ ದಕ್ಷಿಣಃ ಪಕ್ಷಃ ।
ಸತ್ಯಮುತ್ತರಃ ಪಕ್ಷಃ । ಯೋಗ ಆತ್ಮಾ ॥

ಎಂದು ಬರುತ್ತದೆ.

[ಯಥಾ = ಹೇಗೆ.] ಋತವೆಂದರೆ ಯಥಾರ್ಥ, ಸತ್ಯವೆಂದರೂ ಯಥಾರ್ಥ. ಯಥಾರ್ಥವೆಂದರೆ ಒಂದು ಸಂಗತಿ ಅಥವಾ ವಸ್ತು ಹೇಗೆ ಇದೆಯೋ ಹಾಗೆಯೇ ಅದನ್ನು ಗ್ರಹಿಸುವುದು. ಒಂದೇ ಯಥಾರ್ಥವೆಂಬ ಅರ್ಥವನ್ನು ತಿಳಿಸಿಕೊಡಲು "ಋತ", "ಸತ್ಯ" ಎಂಬ ಎರಡು ಮಾತುಗಳನ್ನು ಉಪಯೋಗಿಸಿರುವುದೇತಕ್ಕೆ ?

ಇಲ್ಲಿ ಎರಡಕ್ಕೂ ಬೇರೆ ಬೇರೆ ಪ್ರಯೋಜನವುಂಟು. 'ಋತ'ವೆಂದರೆ ನಮ್ಮ ಅಂತರಂಗದ ಒಳಗಡೆ ಇತರರ ಪ್ರೇರಣೆ ಸಹಾಯಗಳಿಲ್ಲದೆ ತಾನಾಗಿ ಹೊಳೆಯುವ 'ಯಥಾರ್ಥ'. ಎಂದರೆ ಒಳಹೊಳಪು, ಅಂತರಂಗದೃಷ್ಟಿ. ಇದೇ 'ನಿಜ' ಅಥವಾ 'ನೈಜ'. ಆದರೆ ಮನುಷ್ಯನ ನಡವಳಿಕೆಗೆ ಇಷ್ಟು ಮಾತ್ರವೇ ಸಾಕಾಗುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಒಳಹೊಳಪಿನ ಸ್ಥಿರೀಕರಣ (Confirmation) ಬೇಕಾಗುತ್ತವೆ. ಅದಲ್ಲದೆ ಎಷ್ಟೋ ವಿಷಯ ಗಳಲ್ಲಿ ಒಳಹೊಳಪು ಆಗುವುದೇ ಇಲ್ಲ. ಕ್ರಿಯೆ ಅಥವಾ ವಸ್ತುವು ಸಂಪೂರ್ಣ ವಾಗಿ ಹೊರ ಪ್ರಪಂಚದ್ದೇ ಆಗಿರುವ ಪಕ್ಷದಲ್ಲಿ ಅದರ ತಿಳಿವಳಿಕೆ ನಮಗೆ ಉಂಟಾಗುವುದು ಅಂತರಂಗದಲ್ಲಲ್ಲ. ಅಲ್ಲಿ ಬಹಿಪ್ರಪಂಚದ ತಿಳಿವಳಿಕೆ ಮತ್ತೊಬ್ಬರ ಹೇಳಿಕೆಯಿಂದ ಅಥವಾ ನಮ್ಮ ಜ್ಞಾನೇಂದ್ರಿಯಗಳ ಪ್ರಯತ್ನ ದಿಂದ ನಾವು ಸಂಪಾದಿಸಿಕೊಳ್ಳಬೇಕಾಗುತ್ತದೆ. ಹೀಗೆ ಹೊರ ಪ್ರಪಂಚ ದಿಂದ ನಾವು ಸಾಧಿಸಿಕೊಂಡ ತಿಳಿವಳಿಕೆ ಸತ್ಯ.

ಒಳಹೊಳಪು, ಹೊರಹೊಳಪು—ಇವು ಎರಡೂ ಸತ್ಯಕ್ಕಿರುವ ಪ್ರಮಾಣ ಗಳು. ಅವು ಎರಡೂ ಒಂದನ್ನೊಂದು ಸಮರ್ಥಿಸಿದಾಗ ನಾವು ನಿಶ್ಶಂಕೆಯಿಂದ ಕೆಲಸಮಾಡಬಹುದು. ಹೀಗೆ ಋತವೆಂದರೆ ಅಂತರನುಭೂತ, ಸತ್ಯವೆಂದರೆ ಬಹಿಸ್ಸಾಧಿತ ಯಥಾರ್ಥವೆಂದು ಹೇಳಬಹುದು. ಎರಡೂ ನಮ್ಮ ಸರಿಯಾದ ನಡವಳಿಕೆಗೆ ಅವಶ್ಯವಾದವು.

ಮನುಷ್ಯನು ಯಾವ ಕೆಲಸವನ್ನಾದರೂ, ಅದು ಯಾವುದಾದರಾಗಲಿ, ಎಂಥಾದ್ದಾದರಾಗಲಿ, ಚೆನ್ನಾಗಿ ಮಾಡಿ ಅದು ಸಾರ್ಥಕವಾಗಬೇಕಾದರೆ ಮೊದಲು ಅವನಲ್ಲಿ ಆ ವಿಷಯದಲ್ಲಿ ನಂಬಿಕೆಯಿರಬೇಕು. ಆ ಕೆಲಸ ಅವಶ್ಯ ವಾದದ್ದು, ಅದರಿಂದ ಯಾರಿಗಾದರೂ ಪ್ರಯೋಜನವುಂಟು ಎಂಬ ನಂಬಿಕೆ ಯಿರಬೇಕು. ಅಂಥ ನಂಬಿಕೆಯೇ ಶ್ರದ್ಧೆ. ಅದು ಅಷ್ಟು ಮುಖ್ಯವಾದದ್ದೆಂದೇ ಮಹರ್ಷಿಗಳು ಅದಕ್ಕೆ 'ಶಿರಸ್' (ತಲೆ) ಸ್ಥಾನವನ್ನು ಕೊಟ್ಟಿದ್ದಾರೆ.

ತಸ್ಯ ಶ್ರದ್ಧೈವ ಶಿರಃ ||

ಶಿರಸ್ಸಿದ್ದ ಮೇಲೆ ಭುಜಗಳಿರಬೇಕಷ್ಟೆ? ಭುಜದ ಮೇಲೆಯೇ ಅಲ್ಲವೆ ಶಿರಸ್ಸು?

ಅಂತಃಸ್ಫುರಣೆ, ಬಹಿರ್ಗ್ರಹಣೆ—ಇವೇ ಆ ಬಲಭುಜ, ಎಡಭುಜ.

ಒಳಹೊಳಪೇ ಋತ, ಅದೇ ಬಲಗಡೆ; ಅದನ್ನು ಸ್ಥಿರಗೊಳಿಸಲು ಬಹಿರ್ಗ್ರಹಣೆ, ಅದೇ ಸತ್ಯ, ಅದೇ ಎಡಗಡೆ.

ಎರಡು ಬಾಹುಗಳೂ ಕೂಡಿದಾಗ ಸತ್ಯ ಪ್ರಾಪ್ತಿಯು ನಿಸ್ಸಂಶಯ. ಇಂಥ ದ್ವಿಪಕ್ಷ ಸತ್ಯದ ಮೇಲೆ ನಿಂತಿರುವುದು ಶ್ರದ್ಧೆ. ಆದದ್ದರಿಂದ ಮನುಷ್ಯಜೀವನದ ಸಾರ್ಥಕ್ಯ.

೧೨

ನಮಗೆ ತಿಳಿದಿರುವ ಮತ್ತು ನಾವು ಊಹಿಸಿಕೊಂಡಿರುವ ಸಮಸ್ತ ಪ್ರಪಂಚಕ್ಕೂ ಒಬ್ಬ—ಒಬ್ಬನೇ ಒಬ್ಬ—ಮೂಲಕರ್ತನಿದ್ದಾನೆಂದು ವೇದವು ಅಂಗೀಕರಿಸಿದೆ. ಆ ಮೂಲಕರ್ತನನ್ನು ವೇದವು ಬ್ರಹ್ಮ ಎಂದು ಕರೆದಿದೆ. ಬ್ರಹ್ಮ ಎಂದರೆ ಬೃಹತ್ತಾದದ್ದು, ದೊಡ್ಡದಾದದ್ದು, ನಮಗೆ ತಿಳಿದಿರುವುದರಲ್ಲೆಲ್ಲ ಅತ್ಯಂತ ದೊಡ್ಡದಾದದ್ದು, ಎಂದರ್ಥ. ಇಲ್ಲಿ ನಾವು ಬ್ರಹ್ಮ ಎಂಬ ಶಬ್ದವನ್ನು ಆ ಅರ್ಥದಲ್ಲಿ ಉಪಯೋಗಿಸೋಣ.

ಬ್ರಹ್ಮವು ಕೇವಲ ಚೈತನ್ಯ, ಜ್ಞಾನಮಯ ಶಕ್ತಿ.

ಜಗನ್ಮೂಲಚೈತನ್ಯವಾದ ಬ್ರಹ್ಮವು ಜಗತ್ತನ್ನು ಸೃಷ್ಟಿಸುವುದಕ್ಕೆ ಮುಂಚಿನ ಕಾಲದಲ್ಲಿ ಏಕೈಕವಾಗಿತ್ತು. ಆ ಸೃಷ್ಟಿಪೂರ್ವಕಾಲವು ಇದ್ದದ್ದು ಯಾವಾಗ? ಸೃಷ್ಟಿಯಾದದ್ದು ಯಾವಾಗ? ಈ ಪ್ರಶ್ನೆಗಳಿಗೆ ಉತ್ತರವಿಲ್ಲ. ಸೃಷ್ಟಿ ಯಾವಾಗಲೂ ಇದ್ದುಕೊಂಡೇ ಇದೆ. ಅದಕ್ಕೆ ಪ್ರಾರಂಭವೆಂಬುದು ನಮ್ಮ ಮನುಷ್ಯಕಲ್ಪನೆ. ಒಂದು ಕಥೆ ಹೇಳುವುದಕ್ಕೆ ಒಂದು ಕಾಲಾರಂಭವನ್ನು ಕಲ್ಪಿಸಿಕೊಳ್ಳುವುದು ಒಂದು ಬೋಧನಸೌಕರ್ಯ ಅಷ್ಟೆ. ನಾವು ಪ್ರಪಂಚದಲ್ಲಿ ಕಾಣಲಾಗುವ ಎಲ್ಲ ವಸ್ತುಗಳಿಗೂ ಒಂದು ಮೊದಲು, ಒಂದು ನಡುವೆ, ಒಂದು ಕೊನೆ ಇರುತ್ತವೆ. ಹೀಗೆ ಆದಿ ಮಧ್ಯ ಅಂತಗಳೆಂಬ ಗಣನೆ ನಮಗೆ ಲೋಕದಿಂದ ಅಭ್ಯಾಸವಾಗಿರುತ್ತದೆ. ಆದದ್ದರಿಂದ ಅದು ಜಗತ್ತಿಗೂ ಉಂಟೆಂದು ಕಲ್ಪನೆ ಮಾಡಿಕೊಂಡು ಸೃಷ್ಟಿಯಾದಿಯೆಂಬ ಒಂದು ಸಂಕೇತವನ್ನು ಮನಸ್ಸಿನಲ್ಲಿ ಮಾಡಿಕೊಂಡಿರುತ್ತೇವೆ. ವಾಸ್ತವವಾಗಿ ಅದಕ್ಕೆ ಯಾವುದೋ ಒಂದು ಪಂಚಾಂಗಸಿದ್ಧವಾದ ತಾರೀಖಿಲ್ಲ. ನಾವು ಊಹಿಸಿಕೊಂಡ ಯಾವುದೋ ಒಂದು ಕಾಲಕ್ಕೆ ಹಿಂದೆ ಬ್ರಹ್ಮವು ತಾನು ಒಂದೇ ಒಂದಾಗಿ

ತಾನೇ ತಾನಾಗಿ ಇತ್ತೆಂದು ಭಾವಿಸಿಕೊಳ್ಳೋಣ. ಆಗ ಆ ಚೈತನ್ಯಕ್ಕೆ ಒಂದು ಯೋಚನೆ ಬಂತಂತೆ: "ನಾನು ಇಷ್ಟು ಅಪಾರವಾದ ಶಕ್ತಿಯುಳ್ಳವನಾಗಿದ್ದೇನೆ, ಏನು ಪ್ರಯೋಜನ? ಯಾವುದಕ್ಕೆ ಶಕ್ತಿ? ನನ್ನ ಈ ಒಬ್ಬಂಟಿತನದಿಂದ ಏನು ಸಂತೋಷ?"—ಹೀಗೆಂದುಕೊಂಡು ಸೃಷ್ಟಿಗೆ ಆರಂಭಿಸಿತಂತೆ. ಆದರೆ ಈಗ ಇನ್ನೊಂದು ಯೋಚನೆ: "ನಾನು ಸೃಷ್ಟಿಮಾಡಿದ್ದೇ ನನ್ನ ಮೇಲೆ ತಿರುಗಿ ಬಿದ್ದರೆ...!! ನಾನು ಒಬ್ಬಂಟಿಯಾಗಿದ್ದರೆ ಸಂತೋಷವಿಲ್ಲ. ಇಬ್ಬರಾದರೆ ವಿರೋಧಭಯ. ಇದಕ್ಕೇನು ಮಾಡಬೇಕು? ಇಬ್ಬರಿರಬೇಕು. ಆ ಇಬ್ಬರಲ್ಲಿ ಸ್ನೇಹವೇ ಇರಬೇಕು. ಆಗ ಸರಿಹೋಗುತ್ತದೆ."—ಹೀಗೆಂದು ಬ್ರಹ್ಮ ಯೋಚನೆಮಾಡಿ ಲೋಕವನ್ನು ನಿರ್ಮಿಸಿತಂತೆ. ಈ ಮೂಲ ಉದ್ದೇಶದಿಂದ ನಿರ್ಮಿತವಾದದ್ದು ಈ ಪ್ರಪಂಚ. ಮೊದಲು ಒಂದಿದ್ದದ್ದು ತಾನೇ ಹತ್ತಾಗಿ, ಹತ್ತು ನೂರಾಗಿ, ನೂರು ಸಾವಿರವಾಗಿ, ಸಾವಿರ ಹತ್ತು ಸಾವಿರವಾಗಿ, ಬಳಿಕ ಅವೆಲ್ಲ ಒಂದೇ ಒಂದರ ಅಂಗಗಳೆಂಬಂತೆ ನಡೆದುಕೊಳ್ಳಬೇಕು. ಈ ತತ್ತ್ವದಿಂದ ಆದದ್ದು ಜಗದ್ವ್ಯವಸ್ಥೆ: ಏಕದಲ್ಲಿ ಅನೇಕ, ಅನೇಕದಿಂದ ಏಕ. ಇದಕ್ಕೆ ಸಾಧಕವಾಗಿರಬೇಕಾದದ್ದು ಧರ್ಮ. ಈ ಧರ್ಮತತ್ತ್ವವನ್ನು ಏಕ—ಅನೇಕಗಳಲ್ಲಿ ರೂಪಗೊಳಿಸಿರುತ್ತದೆ ಜಗದ್ವ್ಯವಸ್ಥೆ.

೧೩

ಧರ್ಮವೆಂಬುದು ಒಳ್ಳೆಯದನ್ನು ಸಂಪಾದಿಸಬಲ್ಲ ನಡತೆ. ಒಳ್ಳೆಯದು "ಸತ್." ಮನುಷ್ಯಬುದ್ಧಿಗೆ ಗೋಚರವಾಗಿರುವ ಸದ್ವಸ್ತುಗಳಲ್ಲಿ ಸರ್ವೋತ್ಕೃಷ್ಟವಾದ "ಸತ್" ಪದಾರ್ಥವು ಆತ್ಮವೆಂಬುದು. ಪರಮಾತ್ಮನೇ ಪರಮ ಸತ್–ಎಂದರೆ ಪರಮ ಶಾಶ್ವತನು, ಹಾಗೆಯೇ ಪರಮ ಮಂಗಳನು. ಆದದ್ದರಿಂದ ಪರಮಾತ್ಮನನ್ನೇ ಉದ್ದೇಶದಲ್ಲಿಟ್ಟುಕೊಂಡು ನಡೆದ ನಡವಳಿಕೆಯೇ "ಧರ್ಮ".

"ಋತ" ಶಬ್ದದ ಅರ್ಥದಲ್ಲಿರುವಂತೆ "ಧರ್ಮ" ಶಬ್ದದಲ್ಲಿಯೂ ಮೂರು ನಾಲ್ಕು ಪದರಗಳು ಕಾಣಬರುತ್ತವೆ:

(೧) ಆತ್ಮಗುಣಸಂಪತ್ತು: ಒಂದಾನೊಂದು ವಸ್ತುವಿಗೆ ಯಾವ ಕಾರಣದಿಂದ ಲೋಕದಲ್ಲಿ ಬೆಲೆ ಬಂದಿದೆಯೋ ಆ ಕಾರಣಗುಣ ಅಥವಾ ಶಕ್ತಿ ಅದರ ಧರ್ಮ. ಯೋಧನಿಗೆ ಕತ್ತಿಯ ಬೆಲೆ ಅದರ ಅಲಗಿನ ಹರಿತದಿಂದ; ಅದರ ಹಿಡಿಕೆಯ ಚಿನ್ನರನ್ನಗಳಿಂದ ಅಲ್ಲ. ಗಾಯಕನಿಗೆ ವೀಣೆಯ ಬೆಲೆ ಅದರ ತಂತಿಯ ನಾದದಿಂದ, ಅದರ ಬುರುಡೆ-ದಂಡಗಳ ಅಲಂಕಾರದಿಂದಲ್ಲ.

ಮನುಷ್ಯನ ವಿಷಯದಲ್ಲಿಯೂ ಹಾಗೆಯೇ ಅಲ್ಲವೆ? ಅವನವನು ಅವನವನಲ್ಲಿರುವ ಪ್ರಯೋಜನಕರವಾದ ಗುಣವನ್ನು, ಅಥವಾ ಶಕ್ತಿಯನ್ನು, ಅಭಿವೃದ್ಧಿಪಡಿಸಿಕೊಂಡು ಅದನ್ನು ಲೋಕಜೀವನಕ್ಕೆ ವಿನಿಯೋಗಿಸುವುದು ಅವನವನ ಧರ್ಮ. ವಿದ್ಯಾರ್ಥಿ ಒಳ್ಳೆಯ ವಿದ್ಯಾರ್ಥಿಯಾಗಿರಬೇಕು. ಯೋಧನು ಸಮರ್ಥನಾದ ಯೋಧನಾಗಿರಬೇಕು. ರೈಲುಕಂಬಿ ಭಾರ ಹೊರಬಲ್ಲದ್ದಾಗಿರಬೇಕು, ವೀಣೆಯ ತಂತಿ ಮಧುರನಾದವನ್ನು ಕೊಡತಕ್ಕದ್ದಾಗಿರಬೇಕು. ಹೀಗೆ ಅದದು ಅದರದರ ಲೋಕೋಪಯೋಗ ಯೋಗ್ಯತೆಯಲ್ಲಿ ಸಮೃದ್ಧವಾಗಿರಬೇಕು. ಈ ಬಗೆಯ ತತ್ತದಾತ್ಮಗುಣಪ್ರಾಚುರ್ಯವೇ ಧರ್ಮ. ಇದೇ ಸ್ವಧರ್ಮ ಪ್ರಶಸ್ತಿ. ಇದಕ್ಕಾಗಿಯೇ ಸ್ವಾತಂತ್ರ್ಯ. ಮನುಷ್ಯನು ತನ್ನ ಒಳಗಡೆ ಇರುವ ಸತ್ತ್ವವನ್ನೂ ತೇಜಸ್ಸನ್ನೂ ತನ್ನ ನೈಜಕ್ಕೆ ಅನುಗುಣವಾಗಿ—ಇತರರ ಅಡ್ಡಿ ಆತಂಕಗಳಿಲ್ಲದೆ—ಬೆಳಸಿ, ಬೆಲೆ ತಂದುಕೊಳ್ಳುವ ಅವಕಾಶವೇ ವ್ಯಕ್ತಿಸ್ವಾತಂತ್ರ್ಯ. ಹೀಗೆ ಸ್ವಾತಂತ್ರ್ಯದ ನೀತಿಮೂಲ ಧರ್ಮತತ್ತ್ವದಲ್ಲಿರುತ್ತದೆ.

(೨) ಅನ್ಯಗುಣಗೌರವ:—ಆತ್ಮಗುಣವಿಕಾಸದಲ್ಲಿ ಒಬ್ಬನಿಂದ ಇನ್ನೊಬ್ಬನಿಗೆ ಭಂಗವಾಗದಂತೆ ಪ್ರತಿಯೊಬ್ಬನೂ ಸಂಯಮದಿಂದ ನಡೆದುಕೊಳ್ಳಬೇಕಾದದ್ದು ಧರ್ಮ. ಸ್ವಧರ್ಮನಿಷ್ಠೆಯ ಜೊತೆಗೆ ಪರಧರ್ಮಗೌರವ ಸೇರಿರಬೇಕು. ತನ್ನ ವ್ಯಕ್ತಿತ್ವ ಮತ್ತೊಬ್ಬನ ವ್ಯಕ್ತಿತ್ವವನ್ನು ಕುಗ್ಗಿಸದೆ, ಕೂಡಿದಮಟ್ಟಿಗೂ ಬೆಳಸುವುದಾಗಬೇಕು ಮೃದಂಗದ ನಾದ ಪಿಟೀಲಿನದನ್ನು ಮುಳುಗಿಸಬಾರದು. ಹಾಡುವವನ ಕಂಠಶ್ರುತಿ ತಂಬೂರಿಗೆ ಮೀರಬಾರದು. ಮನುಷ್ಯರ ಪರಸ್ಪರ ವ್ಯವಹಾರದಲ್ಲಿ ಈ ನಿಯಮವೇ ನ್ಯಾಯವೆಂದೂ ನೀತಿಯೆಂದೂ ರೂಪುಗೊಂಡಿರುತ್ತದೆ. ಇದೇ ಧರ್ಮದ ತಿರುಳು. ನಮ್ಮ ಸಾಮಾನ್ಯ ಭಾಷೆಯಲ್ಲಿ, ನ್ಯಾಯ, ನೀತಿ, ಧರ್ಮ—ಈ ಮೂರು ಪದಗಳನ್ನೂ ಏಕಾರ್ಥ ಪದಗಳಂತೆಯೇ ಬಳಸುತ್ತೇವೆ. ಅದು ಯುಕ್ತವಾದದ್ದೇ ಸರಿ. ಆತ್ಮಗುಣವಿಕಾಸವು ಪರಗುಣವಿಕಾಸಕ್ಕೆ ಅನುಕೂಲವಾಗಿ ಸಹಾಯಕವಾಗಬೇಕು. ಹಾಗಿದ್ದರೆ ಅದು ಯುಕ್ತವೆನಿಸುತ್ತದೆ. ಆತ್ಮಗುಣವಿಕಾಸವು ಧರ್ಮದ ಒಂದು ರೂಪವಾದರೆ ಆತ್ಮಗುಣಶೋಧನೆಯೂ ಸಂಯಮವೂ ಧರ್ಮದ ಇನ್ನೊಂದು ರೂಪ. ಸ್ವಾತಂತ್ರ್ಯದಂತೆಯೇ ನ್ಯಾಯವು ಧರ್ಮದ ಒಂದು ಪ್ರಕಾರ.

(೩) ಈ ಮೇಲಣ ಎರಡು ಭಾವನೆಗಳಲ್ಲಿ ಜೀವಗಳ ನಾನಾತ್ವವನ್ನು ಅಂಗೀಕರಿಸಿದೆ. ಆ ನಾನಾತ್ವದ ಹಿಂದುಗಡೆ ಒಂದು ಏಕತ್ವ—ಅನೇಕ ಮಣಿಗಳ ಸರದ ಒಳಗಡೆ ಏಕಸೂತ್ರವಿರುವಂತೆ—ಅನ್ಯೋನ್ಯ ಸಂಬಂಧಕಾರಕ

ವಾಗಿ ಇರುತ್ತದೆ.* ಆ ಸೂತ್ರಾತ್ಮದ ಸ್ಮರಣೆಯನ್ನನುಸರಿಸಿದ ನಡವಳಿಕೆ ಧರ್ಮ. ಜಗತ್ತು ಈಶ್ವರನದು. ಈಶ್ವರಾಂಶ ಎಲ್ಲ ಜೀವಗಳಲ್ಲಿಯೂ ಇರುತ್ತದೆ. ಈ ಈಶ್ವರ ಸರ್ವಾತ್ಮತ್ವವನ್ನು ಅಭ್ಯಾಸದಿಂದ ಅನುಭವಕ್ಕೆ ತಂದುಕೊಳ್ಳುವ ಎಲ್ಲ ಆತ್ಮಶಿಕ್ಷಣವಿಧಾನವೂ ಧರ್ಮಾಂಗವೇ. ಹೀಗೆ ಇಂದ್ರಿಯನಿಗ್ರಹ, ವಿರಕ್ತಿ, ಭಗವದ್ಧ್ಯಾನ, ಪರಮಾತ್ಮಚಿಂತನೆ ಮೊದಲಾದ ಬ್ರಹ್ಮಾನುಸಂಧಾನ ಕ್ರಮಗಳು ಧರ್ಮದ ಮುಖ್ಯೋದ್ದೇಶವಾಗುತ್ತವೆ.

(೪) ಜೀವದ ಕರ್ಮಕ್ಷೇತ್ರವನ್ನು ವಿಸ್ತಾರಪಡಿಸಿ ಅದು ವಿಶ್ವಜೀವನ ದಲ್ಲಿ ಲೀನವಾಗುವಂತೆ ಮಾಡುವ—ಎಂದರೆ ಸ್ವಾರ್ಥತೆಯನ್ನು ಸವೆಯಿಸಿ ಲೋಕಹಿತಭಾವವನ್ನು ಅಭಿವೃದ್ಧಿಗೊಳಿಸುವ—ಎಲ್ಲ ಪುಣ್ಯಕ್ರಿಯೆಗಳೂ ಧರ್ಮವಾಗುತ್ತವೆ. ಜೀವಾತ್ಮವು ದೇಹೇಂದ್ರಿಯಗಳ ಅಭಿಮಾನದಿಂದ ಸಂಕುಚಿತವಾಗಿರುವ ಸ್ಥಿತಿಯಿಂದ ಕ್ರಮಕ್ರಮವಾಗಿ ಬಿಡುಗಡೆಪಡೆದು ವಿಶ್ವಾತ್ಮಭಾವವನ್ನು ಅನುಸಂಧಾನಿಸಬೇಕು. ಇದಕ್ಕೆ ದಾನ, ಪರೋಪಕಾರ, ಭೂತದಯೆ, ಜೀವಸಹಾನುಭೂತಿ ಮೊದಲಾದುವು ಸಾಧಕಗಳಾಗುತ್ತವೆ. ಈ ಆತ್ಮವಿಸ್ತರಣಾಭ್ಯಾಸಕ್ಕೆ ಬೇಕಾದ ಅವಕಾಶಗಳು ಲೋಕಸಂಪರ್ಕದಿಂದ. ಮನೆ, ಕುಟುಂಬ, ಕುಲ, ರಾಜ್ಯ, ಸಮಾಜ, ಮಿತ್ರಗೋಷ್ಠಿ ಮೊದಲಾದ ಎಲ್ಲ ಸಾಂಘಿಕ ವ್ಯವಸ್ಥೆಗಳೂ ನಿಸ್ಸ್ವಾರ್ಥತೆಯ ಅಭ್ಯಾಸಕ್ಕೂ ಲೋಕಸಹಾನು ಭವದ ಅಭ್ಯಾಸಕ್ಕೂ ಸಾಧಕಗಳಾಗಿ ಧರ್ಮಸಂಸ್ಥೆಗಳೆನಿಸುತ್ತವೆ. ಹೀಗೆ ಲೋಕ ಜೀವನವನ್ನೆಲ್ಲ ಸುವ್ಯವಸ್ಥಿತವನ್ನಾಗಿ ಮಾಡುವ ಕ್ರಮ—ಲೋಕ ಜೀವನ ವನ್ನು "ಧರಿಸುವ" ಅಥವಾ ಪರಿಪೋಷಿಸುವ ಕ್ರಮ—ಧರ್ಮವಾಗುತ್ತದೆ.

ನಮಗೆ ಇಷ್ಟವಾದದ್ದಕ್ಕೂ ನಮಗೆ ಹಿತವಾದದ್ದಕ್ಕೂ ಸ್ಪರ್ಧೆ ಬಂದಾಗ, ಕ್ಷಣಿಕ ಸುಖಕ್ಕೂ ಚಿರಕಾಲದ ಶುಭಕ್ಕೂ ಸ್ಪರ್ಧೆ ಬಂದಾಗ, ಕೊಂಚ ಮುಂದಿಯ ಲಾಭಕ್ಕೂ ಬಹುಮುಂದಿಯ ಪ್ರಯೋಜನಕ್ಕೂ ಸ್ಪರ್ಧೆ ಬಂದಾಗ, ದೇಹದ ಭೋಗಕ್ಕೂ ಜೀವದ ಸಂಸ್ಕಾರಕ್ಕೂ ಸ್ಪರ್ಧೆ ಬಂದಾಗ, ದೊಡ್ಡ ದಾದದ್ದನ್ನೂ ಮೇಲಾದದ್ದನ್ನೂ ಆಲೋಚಿಸಿ, ಯಾವ ಬಗೆಯ ನಡತೆಯಿಂದ ನಾವು "ಸತ್" ಪದಾರ್ಥಕ್ಕೆ ಹತ್ತಿರಹತ್ತಿರ ಹೋಗುವುದು ಹೆಚ್ಚು ಸಾಧ್ಯ ತೋರುತ್ತದೆಯೋ ಆ ಬಗೆಯ ನಡತೆಯು ನಮಗೆ ಧರ್ಮವಾಗುತ್ತದೆ.

---

* ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ |
ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ||

—(ಭಗವದ್ಗೀತಾ VII-7)

ಜೀವವನ್ನು ಧರಿಸಬಲ್ಲದ್ದು ಧರ್ಮ. ಧರಿಸುವುದೆಂದರೆ ಹೊತ್ತು ಕಾಪಾಡುವುದು. ಆ ಕಾಪಾಡುವ ಶಕ್ತಿಯೇ "ಸತ್" ತತ್ತ್ವ—ಎಂದರೆ ಪರಮಾತ್ಮವಸ್ತು, ದೇವರು, ಪರಬ್ರಹ್ಮ. ಆ ಕಾರಣದಿಂದ ಅಂಥಾ "ಸತ್" ತತ್ತ್ವವನ್ನು ಆಧಾರವಾಗಿರಿಸಿಕೊಂಡು "ಸತ್" ಪ್ರಾಪ್ತಿಗಾಗಿ ನಡೆದ ನಡವಳಿಕೆಯೇ ಧರ್ಮ.

ಹೀಗೆ ಆತ್ಮ, ಋತ, ಸತ್ಯ, ಧರ್ಮ, ನೀತಿ, ನ್ಯಾಯ, ನಿಯತಿ, ವ್ರತ, ಶ್ರೇಯಸ್ಸು,—ಇವೆಲ್ಲ ಪರಸ್ಪರ ಅನುಬದ್ಧಗಳಾದ ಭಾವನೆಗಳು.

೧೪

ಈ ಮೇಲಣ ಚರ್ಚೆಯನ್ನು ಈಗ ಹೀಗೆ ಸಂಗ್ರಹಿಸಿ ಹೇಳಬಹುದು :—

ನಾವು ಮನಸ್ಸಿನೊಳಗೆ ಕಂಡ ಸತ್ಯವು—ಎಂದರೆ ಋತವು—ವಾಗ್ರೂಪದಲ್ಲಿ ವ್ಯವಹಾರಕ್ಕಿಳಿಯುವಾಗ ವ್ಯತ್ಯಾಸ ಪಡೆಯಲು, ನಮ್ಮ ಸ್ವಾರ್ಥಪ್ರೇರಣೆಯ ಹೊರತು, ಇರುವ ಕಾರಣಗಳು ಯಾವುವೆಂದರೆ :—

(೧) ಆದರ ಶುದ್ಧ ಸತ್ಯತೆಯ ಮತ್ತು ಪರಿಪೂರ್ಣ ಸತ್ಯತೆಯ ವಿಷಯದಲ್ಲಿ ನಮಗೇ ಇರುವ ಶಂಕೆ: ನಮ್ಮೊಳಗಣ ಭ್ರಾಂತಿಪ್ರಮಾದಗಳು ನಮಗೆ ತಿಳಿಯಬಾರದೆ ನಮ್ಮಿಂದ ತಪ್ಪುಹೆಜ್ಜೆ ಹಾಕಿಸಬಹುದೆಂಬ ಶಂಕೆ.

(೨) ಭಾಷೆಯ ಅಯುಕ್ತತೆ: ಇದು ನಿಘಂಟುವಿನ ನ್ಯೂನತೆಯಿಂದಾಗಿರಬಹುದು; ಅಥವಾ ನಮ್ಮ ಪಾಂಡಿತ್ಯದ ನ್ಯೂನತೆಯಿಂದಲೋ ಅಜಾಗ್ರತೆಯಿಂದಲೋ ಆಗಿರಬಹುದು.

(೩) ನಾವಾಡಿದ ಮಾತಿನಿಂದ ಯಾರಿಗಾದರೂ ಕೆಡಕಾದೀತೇನೋ ಎಂಬ ಶಂಕೆ: ಕೆಡಕು ಎಂಬುದು ಅಹಿತ.

(೪) ನಾವಾಡಿದ ಮಾತಿನಿಂದ ಯಾರಿಗಾದರೂ ನೋವಾದೀತೇನೋ ಎಂಬ ಶಂಕೆ: ನೋವೆಂಬುದು ಅಪ್ರಿಯ. (ನೋವೆಲ್ಲ ಕೆಡಕಲ್ಲ: ಉಪಾಧ್ಯಾಯನ ಕೈಯ ಪೆಟ್ಟೂ ಶಸ್ತ್ರವೈದ್ಯನ ಚೂರಿಯ ಹರಿತವೂ ನೋಯಿಸಬಹುದು, ಆದರೆ ಆದರ ಫಲ ಒಳ್ಳೆಯದು. ಇಷ್ಟವಾದದ್ದೆಲ್ಲ ಹಿತವಲ್ಲ; ಮಕ್ಕಳಿಗೆ ಚಿರುತಿಂಡಿ ಇಷ್ಟ, ಆರೋಗ್ಯವಲ್ಲ.)

(೫) ಒಂದಾನೊಂದು ಮಹಾಧ್ಯೇಯಕ್ಕೆ ಲೋಕಸಾಮಾನ್ಯದ ಅಂಗೀಕಾರವನ್ನು ಸಂಪಾದಿಸಿಕೊಡಲು ಸಾಧಕವಾಗಬಹುದಾದ ಕ್ರಮಿಕ ನಿರೂಪಣೆಯ ಉಪಾಯ: ನಾವಾಡುವ ಮಾತಿನ ಅರ್ಥ ಬಹು ಆಳವಾದ

ದ್ದಾಗಿ, ಅಥವಾ ಬಹು ಉನ್ನತದ್ದಾಗಿ, ಬಹುಗಹನವಾಗಿ ಸಾಮಾನ್ಯ ಜನಕ್ಕೆ ಪೂರ್ತಿ ತಿಳಿಯಲಾಗದ್ದಾಗಿರಬಹುದು. ಅಥವಾ ಅದರ ತತ್ತ್ವವು ಜನದಿಂದ ಯಾವ ನೀತಿನಿಯಮಗಳನ್ನು ಬಯಸುತ್ತದೆಯೋ ಆ ನೀತಿನಿಯಮವು ಅವರ ಸಂಸ್ಕೃತಿಯ ಮಟ್ಟದಿಂದ ಬಹು ಎತ್ತರವಾಗಿ ಕೈಗೆ ನಿಲುಕದೆ ಇರಬಹುದು. ಆಗ ನಮ್ಮ ಅರ್ಥವನ್ನು ಅಥವಾ ತತ್ತ್ವವನ್ನು ಕೊಂಚಕೊಂಚವಾಗಿ ಕ್ರಮ ಕ್ರಮವಾಗಿ ಹೊರಪಡಿಸಿದಲ್ಲಿ ಜನಕ್ಕೆ ಅದು ಗ್ರಾಹ್ಯವಾಗಬಹುದು.* ಪಾಠ ಶಾಲೆಯಲ್ಲಿ ಬೋಧಕನು ಬೋಧ್ಯವಿಷಯವನ್ನೆಲ್ಲ ಒಂದೇ ಪಾಠದಲ್ಲಿ ಹೇಳುವು ದಿಲ್ಲ. ಅದನ್ನು ಒಂದು ಸೋಪಾನಮಾರ್ಗದ ಕ್ರಮಿಕನಯದಿಂದ ಕಲಿಸು ತ್ತಾನೆ. ಹೀಗೆ ಲೋಕಶಿಕ್ಷಣಸೌಲಭ್ಯಕ್ಕಾಗಿಯೂ ಸತ್ಯಭಾಷಣದಲ್ಲಿ ಒಂದು ಅಂಶಿಕೋಪಾಯವನ್ನು ಅನುಸರಿಸಬೇಕಾದೀತು.

ಹೀಗೆ "ಋತ"ವನ್ನು--ಮಾನಸಿಕ ಸತ್ಯವನ್ನು—ಧರ್ಮವಾಗಿ ರೂಪಾಂತರಗೊಳಿಸುವುದರಲ್ಲಿ ನಾಲ್ಕಾರು ಶಂಕೆಗಳೂ ಆಲೋಚನೆಗಳೂ ವಿಚಾರಾರ್ಹಗಳಾಗಿ ಬಂದು ಸೇರಿ ಸತ್ಯದ ಬಾಹ್ಯರೂಪವನ್ನು ನಿಷ್ಕರ್ಷೆ ಮಾಡುತ್ತವೆ.

೧೫

ಧರ್ಮನಿಯಮಗಳು ಪ್ರಕೃತಿನಿಯಮಗಳನ್ನು ಅನುಸರಿಸಬೇಕಾದವೆಂದು ಮೇಲೆ ಒಂದು ವಾಕ್ಯದಲ್ಲಿ ಸೂಚಿಸಿದೆ. ಆ ಎರಡು ಜಾತಿಯ ನಿಯಮಗಳೂ ಒಂದೇ ಅಲ್ಲವೆಂಬ ಅಭಿಪ್ರಾಯ ಆ ಸೂಚನೆಯಲ್ಲಿಯೇ ಅಂತರ್ಗತವಾಗಿದೆ. ಮನುಷ್ಯಪ್ರಾಣಿಗೆ ಸೃಷ್ಟಿಯಲ್ಲಿ ಕಾಣಬರುವಷ್ಟು ನಿಯಮ ಮಾತ್ರವೇ ಸಾಲದು. ಪ್ರಪಂಚದ ಜಡಭಾಗದಿಂದ—ಭೂಮಿ, ನೀರು, ಬಿಸಿಲು, ಗಾಳಿ, ಮೋಡ,—ಇವುಗಳ ಕಾರ್ಯಕ್ರಮಗಳಿಂದ—ಅನುಮಾನಿಸಬಹುದಾಗಿರುವ ವಿಧಿವಿಧಾನಗಳು ಮನುಷ್ಯನ ಹೃದಯಜೀವನಕ್ಕೆ ಯುಕ್ತವಾಗವು. ಪ್ರಪಂಚದ ಚೇತನಭಾಗದ ಮೃಗಪಕ್ಷಿ ಕ್ರಿಮಿಕೀಟಾದಿ ತಿರ್ಯಗ್ಜಂತುಗಳ ವರ್ತನೆಯಿಂದ ಅನುಮಾನಮಾಡಲಾಗುವ ನೀತಿಗಳೂ ಮನುಷ್ಯನಿಗೆ ಸಾಕಾಗವು. ಹಲ್ಲಿ ಸೊಳ್ಳೆಗಳ, ಬೆಕ್ಕು ನಾಯಿಗಳ, ಹಸು ಹುಲಿಗಳ, ಹದ್ದು ಪಾರಿವಾಳಗಳ

* Some secrets may the poet tell,
For the world loves new ways;
To tell too deep ones is not well—
It knows not what he says.
(MATTHEW ARNOLD—*OBERMANN*)

ನಡವಳಿಕೆಯಲ್ಲಿ ಹೊಟ್ಟೆಯದೊಂದೇ ಕಟ್ಟಪ್ಪಣೆಯಾಗಿ, ದೇಹಬಲವೊಂದೇ ನಿರ್ಣಾಯಕವಾಗಿ ಕಾಣುತ್ತದೆ. ಹಸಿವಾದಾಗ ಬಾಯಿಗೆ ಏನು ಸಿಕ್ಕಿದರೆ ಅದು ಸರಿ. "ಜೀವೋ ಜೀವಸ್ಯ ಜೀವನಮ್" (ಭಾಗವತ, ೧-೧೩-೪೬)—ಇದರಲ್ಲಿ ದಯೆಗೂ ದಾಕ್ಷಿಣ್ಯಕ್ಕೂ ಜಾಗವಿಲ್ಲ; ಇದು ಪೂಜ್ಯ, ಇದು ತ್ಯಾಜ್ಯ ಎಂಬ ವಿವೇಕಕ್ಕೆ ಎಡೆಯಿಲ್ಲ; ಇದು ಮಾನ, ಇದು ಹೀನ ಎಂಬ ಉಚ್ಚ ನೀಚ ಭೇದಗಣನೆಗೂ ಅವಕಾಶವಿಲ್ಲ. ಇಂಥ ಜೀವನವು ಮನುಷ್ಯ ಹೃದಯಕ್ಕೊಪ್ಪದು. ಅರ್ಜುನನು ಯುದ್ಧರಂಗದಲ್ಲಿ ನಿಂತು ದೃಷ್ಟಿಪ್ರಸಾರ ಮಾಡಿದಾಗ ಅವನ ಬಾಯಿಂದ ಹೊರಟ ನುಡಿಯೇನು?—

ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್ |
ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ||
ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ |
ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ||

ಅದು ಹೃದಯದ ಧ್ವನಿ. ಈ ಅಂತರಂಗದ ಆಕ್ಷೇಪಣೆ ಪಶುವಿಗೆ ತಿಳಿದದ್ದಲ್ಲ. ಅದಕ್ಕೆ ತನ್ನ ಕರುವಿನ ಮೇಲೆ ಮಮತೆಯ ವಾಸನೆ ಒಂದೆರಡು ವಾರದ ಮಟ್ಟಿಗೆ ಇರುತ್ತದೆಂಬುದು ನಿಜ. ಆದರೆ ಆ ಕ್ಷಣಿಕ ಮಾತ್ರದ ಬಾಂಧವ್ಯವೊಂದರ ಹೊರತು ಇನ್ನಾವ ಬಂಧುಬಳಗದ ಯೋಚನೆಯೂ ಅದಕ್ಕಿರುವಂತೆ ತೋರುವುದಿಲ್ಲ. ತನಗೆ ತನ್ನ ಆಹಾರ, ತನ್ನ ಪ್ರಾಣಕ್ಕಿರಬಹುದಾದ ಅಪಾಯದ ಶಂಕೆ, ತನ್ನ ಹಿಂಡಿನಲ್ಲಿ ತನಗೆ ಕ್ಷೇಮವೆಂಬ ನಂಬಿಕೆ—ಈ ಮೂರು, ಮೃಗದ ಅಂತಃಕರಣವೃತ್ತಿಗಳಲ್ಲಿ ಮುಖ್ಯವಾದುವು. ಅವು ಕೊಂಚ ಮಟ್ಟಿಗೆ ಸಹಜವಾಗಿಯೂ ಇನ್ನು ಕೊಂಚ ಅಭ್ಯಾಸದಿಂದ ಬೆಳೆದೂ ಇರುವ ವೃತ್ತಿಗಳು. ಆ ವೃತ್ತಿಗಳಿಗೆ ಹಿಂದಿರುವ ಪ್ರೇರಣೆಗಳು ಸ್ವಾರ್ಥದುವು; ಕೇವಲ ದೈಹಿಕ ಸ್ವಾರ್ಥದುವು. ಹಸಿವು, ಬೆದೆ, ಹೆದರಿಕೆ, ತನ್ನವರೆಂಬ ನೆಚ್ಚಿಕೆ,-ಈ ದೈಹಿಕ ಸ್ವಾರ್ಥವನ್ನು ಬಿಟ್ಟ ಚಿಂತೆಗಳು—ಪರೋಪಕಾರಪ್ರವೃತ್ತಿ, ಅಂತರಾತ್ಮದೃಷ್ಟಿ, ಭಗವದ್ವಿಷಯ ಸ್ಮರಣೆ, ಭವಿಷ್ಯಹಿತಯತ್ನ ಇಂಥವು ಮೃಗಜಾತಿಯಲ್ಲಿ ಸಾಮಾನ್ಯವಲ್ಲ. ಈ ಅನ್ಯಜನಪ್ರಯುಕ್ತವಾದ—ಸ್ವಾತ್ಮಾವತಾರವೇ ಆದ—ಮತ್ತು ಆಧ್ಯಾತ್ಮಪ್ರಯುಕ್ತವಾದ ಚಿಂತೆಗಳು ಮನುಷ್ಯಜಾತಿಯುವು. ಪ್ರಕೃತಿಯು ಇತರ ಜಂತುಗಳಲ್ಲಿರಿಸದಿರುವ ಯಂತ್ರವೊಂದನ್ನು ಮನುಷ್ಯಪ್ರಾಣಿಯಲ್ಲಿರಿಸಿರುತ್ತಾಳೆ. ಅಂತಃಕರಣವೆಂಬುದು ಆ ಯಂತ್ರ. ಆ ಯಂತ್ರದ ಅಂಗಗಳನ್ನು ಶಾಸ್ತ್ರಜ್ಞರು ಎರಡೆಂದೋ ನಾಲ್ಕೆಂದೋ ಇನ್ನೂ ಹೆಚ್ಚೆಂದೋ

ಏಂಗಡಿಸುವುದುಂಟು. ಸುಖದುಃಖಾದ್ಯನುಭವಗಳು, ಪ್ರಿಯಾಪ್ರಿಯ ಸೂಚನೆಗಳು—ಇವು ಮನಸ್ಸಿನ ಕಾರ್ಯ; ವಸ್ತುಜ್ಞಾನ, ಸ್ಮರಣೆ ಇವು ಚಿತ್ತದ ಕಾರ್ಯ: ವಿವೇಚನೆ, ನಿಶ್ಚಯಗಳು ಬುದ್ಧಿಯ ಕಾರ್ಯ. ಈ ಎಲ್ಲ ಶಕ್ತಿಗಳನ್ನೂ ಚೋದಿಸತಕ್ಕದ್ದು "ನಾನು", "ನನ್ನದು" ಎಂದುಕೊಳ್ಳುತ್ತಿರುವ ಅಹಂಭಾವ. ಇವು ಅಂತಃಕರಣಚತುಷ್ಟಯ. ಈ ಚತುರಂಗ ಸಮನ್ವಿತವಾದ ಯಂತ್ರವು ಮನುಷ್ಯನಲ್ಲಿರುವಷ್ಟು ಸೂಕ್ಷ್ಮಗ್ರಾಹಿಯಾಗಿ ಮತ್ತು ಅಷ್ಟು ಕಾರ್ಯಪಟುವಾಗಿ ಇನ್ನಾವ ಪ್ರಾಣಿಯಲ್ಲೂ ಇಲ್ಲ. ಈ ಅದ್ಭುತ ಯಂತ್ರದ ರಚನೆ ಪ್ರಕೃತಿಕಾರ್ಯದ ಒಂದು ಭಾಗವೇ ಹೊರತು ಬೇರೆಯಲ್ಲ. ಆದದ್ದರಿಂದ ಧರ್ಮನಿಯಮಗಳು ಪ್ರಕೃತಿನಿಯಮಗಳನ್ನು ಹೊಂದಿಕೊಂಡಿರಬೇಕೆನ್ನುವಲ್ಲಿ ಹೃದಯಕ್ರಿಯೆ ಬುದ್ಧಿಕ್ರಿಯೆಗಳಿಗೂ ಅಲ್ಲಿ ಸ್ಥಾನವುಂಟೆಂಬುದು ಸಿದ್ಧವಾಗಿದೆ.

ಮನುಷ್ಯನು ಪ್ರಕೃತಿಯಿಂದ ಬೇರೆಯಲ್ಲ. ಅವನು ಪ್ರಕೃತಿಯ ಒಂದು ಭಾಗವೇ ಸರಿ. ಆದರೆ ಅವನದು ಒಂದು ವಿಶೇಷ ಲಕ್ಷಣ: ಹುಟ್ಟಿನಲ್ಲಿ ಅವನು ಇತರ ಪ್ರಾಣಿಗಳಂತಾಗಿ ಸಿದ್ಧಿಯಲ್ಲಿ ಇತರ ಪ್ರಾಣಿಗಳ ಮಟ್ಟದಿಂದ ಮೇಲೇಳಬಲ್ಲವನು. ಈ ಆತ್ಮೋದ್ಧಾರ ಸಾಮರ್ಥ್ಯವನ್ನು ಪ್ರಕೃತಿಯೇ ಅವನಲ್ಲಿ ಹುದುಗಿಸಿಟ್ಟಿರುತ್ತಾಳೆ. ಆ ಮೇಲಕ್ಕೇಳುವ ವಿಧಾನವೇ ಧರ್ಮ. ಜನ್ಮದಿಂದ ಪ್ರಕೃತ್ಯಂಶವಾಗಿ, ಯತ್ನದಿಂದ ಪ್ರಕೃತ್ಯತೀತನಾಗುವುದು ಮನುಷ್ಯನ ವಿಶೇಷ ಧರ್ಮ.

ಸಮುದ್ರಮಧ್ಯದ ದ್ವೀಪವು ಭೂಮಂಡಲದಿಂದ ಅತೀತವಾದದ್ದೇ ಸರಿ. ಆದರೆ ಆ ದ್ವೀಪಕ್ಕೆ ಹೋಗಬಯಸುವವನು ಹಡಗು ಸೇರುವುದಕ್ಕಾಗಿ ತನ್ನ ಮನೆಯಿಂದ ಒಂದು ಗಜವೋ ಒಂದು ಮೈಲಿಯೋ ನೂರು ಮೈಲಿಗಳೋ ಭೂಪ್ರಯಾಣ ಮಾಡಲೇಬೇಕು. ನೆಲವನ್ನು ನಡೆದು ನಡೆದೇ ಕಡಲ ದಡವನ್ನು ಮುಟ್ಟಬೇಕು ಹಾಗೆಯೇ ಸಮುದ್ರದಲ್ಲಿ ಬಿದ್ದವನು ನೀರನಲ್ಲಿ ಈಜೀಜಿಕೊಂಡೇ ನೆಲದಂಚನ್ನು ಮುಟ್ಟಬೇಕು. ಅದರಂತೆ ಪ್ರಕೃತಿಯೊಡನೆ ವ್ಯವಹಾರ ನಡಸಿಯೇ ಪ್ರಕೃತಿಯನ್ನು ದಾಟಬೇಕು. ಆ ಪ್ರಕೃತಿತರಣಕ್ಕೆ ಸಾಧಕವಾದ ವರ್ತನೆಯೇ ಧರ್ಮ.

೧೬

ಆದರೆ ಈಗ ಕಾಲವು ಧರ್ಮಕ್ಕೆ ಅನುಕೂಲವಾದದ್ದಲ್ಲ. ಧರ್ಮವೆಂದರೆ ಶ್ರಮೆ, ಪ್ರಯಾಸ, ವಿವೇಚನೆಯ ಪ್ರಯಾಸ, ಆತ್ಮಶೋಧನೆಯ ಪ್ರಯಾಸ ಮತ್ತು ಆತ್ಮಸಂಯಮದ ಪ್ರಯಾಸ. ಕಾಲವಾದರೋ ಸುಲಭ ಸುಖಾಕಾಂಕ್ಷೆ

ಯದು. ಇದು ಪ್ರಯಾಸ ಬೇಡವೆನ್ನುತ್ತದೆ. ಎಲ್ಲವೂ ಕಷ್ಟವಿಲ್ಲದೆ ಆಗಬೇಕು. ಕಷ್ಟಪಡದೆ ಧನಾರ್ಜನೆ, ಆಟವಾಡುತ್ತ ಹಣದ ಸಂಪಾದನೆ. ಎಲ್ಲವೂ ಯಾಂತ್ರಿಕವಾಗಬೇಕು. ಗುಂಡಿ ಒತ್ತಿದರೆ ಸ್ವರ್ಗ, ಕೀಲು ತಿರುಗಿಸಿದರೆ ಮೋಕ್ಷ. ಕಾಲಸ್ಥಿತಿ ಹೀಗಿರುವಾಗ, ಮೈಗೆ ನೀರು ಸೋಕಿಸಿ ಕಷ್ಟಪಡಿಸುವುದು ಅನಾಗರಿಕತೆ, ಅವಿಜ್ಞಾನ. ಹಳೆಯ ಕಾಗದ, ಪೇಲಿಕೆ ಇಲ್ಲವೆ? ಅದು ಇದ್ದರೆ ಆಯಿತಲ್ಲ!

ಆದರೆ ಈ ಕಾಲವೂ ಬದಲಾಯಿಸೀತು. ಕೊಳಕು ಕೊಳಕೆನ್ನಿಸುವ ಕಾಲವೂ ಮತ್ತೊಮ್ಮೆ ಬಂದೀತು. ಆಗಿಗೆ--ಆ ಕೃತಯುಗಕ್ಕೆ—ಬೀಜಧಾನ್ಯದಂತೆ ಅಲ್ಲಲ್ಲಿ ಒಬ್ಬರಿಬ್ಬರು ಇರಬೇಕಲ್ಲವೇ? ಹಾಗೆ ಕೃತಕ್ಕೆ ಬೀಜಧಾನ್ಯ ಪ್ರಾಯವಾಗಿ ಇರುವವರಲ್ಲಿ ವಾಚಕ ಮಹನೀಯರೂ ಸೇರಿಕೊಳ್ಳಲಾಗುವಂತೆ ಜಗದೀಶ್ವರನು ಅನುಗ್ರಹಿಸಲಿ.

ಇಂತು ಸರ್ವಂ ಶಿವಂ

# ಡಿ.ವಿ.ಜಿ. ಅವರ ಕೃತಿಗಳು

## ನಾಟಕ:

ವಿದ್ಯಾರಣ್ಯ ವಿಜಯ
ಜಾಕ್‌ಕೇಡ್
ಕನ್ನಡ ಮ್ಯಾಕ್‌ಬೆತ್
ಪರಶುರಾಮ
ಪ್ರಹಸನತ್ರಯೀ

## ನಿಬಂಧ:

ಜೀವನ ಸೌಂದರ್ಯ ಮತ್ತು ಸಾಹಿತ್ಯ
ಸಾಹಿತ್ಯ ಶಕ್ತಿ
ಬಾಳಿಗೊಂದು [illegible]ಕೆ
ಸಂಸ್ಕೃತಿ* ಕಾವ್ಯಸ್ವಾರಸ್ಯ

## ಜೀವನ ಚಿತ್ರ:

ದಿವಾನ್ ರಂಗಾಚಾರ್ಲು
ಗೋಪಾಲಕೃಷ್ಣ ಗೋಖಲೆ
ವಿದ್ಯಾರಣ್ಯರ ಸಮಕಾಲೀನರು
ಜ್ಞಾಪಕ ಚಿತ್ರಶಾಲೆ-೧
ಸಾಹಿತಿ ಸಜ್ಜನ ಸಾರ್ವಜನಿಕರು
ಕಲೋಪಾಸಕರು
ಸಾಹಿತ್ಯೋಪಾಸಕರು
ಮೈಸೂರಿನ ದಿವಾನರುಗಳು
ವೈದಿಕ ಧರ್ಮ ಸಂಪ್ರದಾಯಸ್ಥರು
ಹಲವರು ಸಾರ್ವಜನಿಕರು
ಹೃದಯಸಂಪನ್ನರು
ಸ್ಮೃತಿಚಿತ್ರಗಳು

## ರಾಜಕೀಯ:

ರಾಜ್ಯಾಂಗ ತತ್ತ್ವಗಳು
ರಾಜಕೀಯ ಪ್ರಸಂಗಗಳು
ರಾಜ್ಯಶಾಸ್ತ್ರ* ರಾಜ್ಯಕುಟುಂಬ
ವೃತ್ತಪತ್ರಿಕೆ

## ಧಾರ್ಮಿಕ:

ಈಶೋಪನಿಷತ್ತು
ಪುರುಷಸೂಕ್ತ* ದೇವರು
ಶ್ರೀಮದ್ಭಗವದ್ಗೀತಾ ತಾತ್ಪರ್ಯ

## ಕವಿತೆ:

ವಸಂತಕುಸುಮಾಂಜಲಿ
ನಿವೇದನ
ಉಮರನ ಒಸಗೆ
ಮಂಕುತಿಮ್ಮನ ಕಗ್ಗ
ಶ್ರೀರಾಮ ಪರೀಕ್ಷಣಂ
ಅಂತಃಪುರಗೀತೆ
ಶ್ರೀಕೃಷ್ಣ ಪರೀಕ್ಷಣಂ
ಗೀತಶಾಕುನ್ತಲಮ್
ಶೃಂಗಾರಮಂಗಳಂ
ಕೇತಕೀ ವನ

## ಮಕ್ಕಳ ಸಾಹಿತ್ಯ:

ಇಂದ್ರವಜ್ರ
ಬೆಕ್ಕೋಜಿ

ಕಾವ್ಯಾಲಯ ಪ್ರಕಾಶಕರು * ಜಯನಗರ * ಮೈಸೂರು-೯